# ಪು ತಿ ನ ಗೀತ ನಾಟಕಗಳಲ್ಲಿ
# ತಾತ್ವಿಕ ಚಿಂತನೆಗಳು

ಡಾ. ವಿಜಯಾ ಸುಬ್ಬರಾಜ್



# ಪು ತಿ ನ ಗೀತ ನಾಟಕಗಳಲ್ಲಿ ತಾತ್ವಿಕ ಚಿಂತನೆಗಳು

ಡಾ. ವಿಜಯಾ ಸುಬ್ಬರಾಜ್

ಎಲ್. ಎನ್. ಜಿ. ಪಬ್ಲಿಕೇಷನ್ಸ್
2, ಮುನೇಶ್ವರ ಬ್ಲಾಕಿನ ಎರಡನೆಯ ಕ್ರಾಸ್
(ನಾಗಪ್ಪ ರಸ್ತೆಗೆ ಹೊಂದಿಕೊಂಡಂತೆ)
ರಾಜಮಹಲ್ ಗುಟ್ಟಹಳ್ಳಿ : : ಬೆಂಗಳೂರು-560 003

**PU THI NAA GEETHA NATAKAGALALLI THATVIKA CHINTANEGALU** - (Analytical Study) Dr. Vijaya Subbaraj, Published by L.N.G. PUBLICATIONS, 2, Muneshwara Block, Second Cross, (at Nagappa Street), Rajamahal Guttahalli, Bangalore-560 003. in 2007



ಪ್ರಥಮ ಮುದ್ರಣ : 2007

ಪುಟಗಳು : 140

ಬೆಲೆ ರೂ. 70/-

ಮುಖಪುಟ ವಿನ್ಯಾಸ :
ಮೋನಪ್ಪ

ಅಕ್ಷರ ಜೋಡಣೆ
ಸಿ.ಪಿ. ಇನೊವೇಷನ್ಸ್
ದೂ : 22264016

ಮುದ್ರಕರು :
ಕಿರಣ್ ಎಂಟರ್‌ಪ್ರೈಸೆಸ್
ಬೆಂಗಳೂರು-53

# ನನ್ನ ಮಾತು

ನನ್ನ ಸಂಶೋಧನಾ ಪ್ರಬಂಧಕ್ಕಾಗಿ ಪು.ತಿ.ನ. ಅವರ ಗೀತನಾಟಕಗಳನ್ನು, ಇತರೆ ಸಾಹಿತ್ಯ ಪ್ರಕಾರಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಮತ್ತು ಅವರೊಡನೆ ಚರ್ಚೆ ನಡೆಸುವ ಸಂದರ್ಭಗಳಲ್ಲಿ, ನನಗೆ ಅವರು ವಿಶಿಷ್ಟ ಮನೋಧರ್ಮದ ಮತ್ತು ಸಾಂಪ್ರದಾಯಿಕ ಪರಿವೇಶದಲ್ಲಿರುವ ಆಧುನಿಕ ಮನಸ್ಸಿನ ವ್ಯಕ್ತಿಯಾಗಿ ಗೋಚರಿಸಿದ್ದೇ ಅಲ್ಲದೆ, ಕಾವ್ಯ, ಸಂಗೀತ ಸಂಬಂಧಿ ವಿಚಾರ, ಚಿಂತನೆಗಳಲ್ಲಿ ವ್ಯಕ್ತಿವಿಶಿಷ್ಟತೆಯನ್ನು ಸ್ವತಂತ್ರ ಮನೋಧರ್ಮವನ್ನು ಹೊಂದಿರುವುದನ್ನು ಗುರುತಿಸಿದೆ.

ತಮ್ಮ ಚಿಂತನೆಗಳ ಅಭಿವ್ಯಕ್ತಿಗೆ ಕಾವ್ಯಮಾಧ್ಯಮವಿದ್ದರೂ, ಗಂಭೀರ ಆಲೋಚನೆಗಳನ್ನು ಹೇಳಲು ಅಲ್ಲಿ ಸಾದ್ಯವಿಲ್ಲದಿದ್ದರೂ ಸಾಕಷ್ಟು ಪ್ರಮಾಣದಲ್ಲಿ ಸಂಗೀತವನ್ನು ಕಾವ್ಯದ ಜೊತೆ ಬಯಸುವ ಗೀತನಾಟಕಗಳ ಆಕರ್ಷಣೆಗೆ ಬಿದ್ದದ್ದೇ ನನ್ನ ಕುತೂಹಲಕ್ಕೆ ಕಾರಣವಾಯಿತು. ಇಲ್ಲಿ ಪ್ರೇಕ್ಷಕ, ಸಹೃದಯ ತತ್ವಗಳ, ದೃಶ್ಯ - ಶ್ರವಣಗಳೆರಡರ ಅನಿವಾರ್ಯತೆಯಿರುವಾಗ, ಗಂಭೀರ, ಗಾಢ ತಾತ್ವಿಕ ಆಲೋಚನೆಗಳಿಗೆ ಒಂದು ಮಿತಿ ಏರ್ಪಡುತ್ತದೆ. ಹಾಗಿದ್ದರೂ ಅವರು ಒಲಿದದ್ದೇಕೆಂಬ ಪ್ರಶ್ನೆಗೆ ಅವರ ಅತಿಯಾದ ಸಂಗೀತ ಪ್ರೇಮ, ಆ ಪ್ರಕಾರ ಒದಗಿಸಿದ ವ್ಯಾಪಕ ಭಿತ್ತಿ, ದೃಶ್ಯ ರಮಣೀಯತೆಯ ಬಗೆಗಿನ ಒಲವು ಈ ಪ್ರಕಾರದತ್ತ ಅವರನ್ನು ಪ್ರಚೋದಿಸಿರಬೇಕು ಎನಿಸಿತು. ಹೀಗಿರುವಾಗ ನನಗೆ ಒಂದು ಸಂವಿಧಾನಾತ್ಮಕ ಮಿತಿಯ ಚೌಕಟ್ಟಿನಲ್ಲಿ ಅವರ ತಾತ್ವಿಕ ಚಿಂತನೆಗಳ ಸ್ವರೂಪವನ್ನು ಪ್ರತ್ಯೇಕವಾಗಿ ಕೇವಲ ಗೀತನಾಟಕಗಳಿಗೆ ಮೀಸಲಿರಿಸಿ ಅದ್ಯಯನ ಮಾಡಬೇಕೆಂಬ ಜಿಜ್ಞಾಸೆ ಈ ಕೃತಿ ರಚನೆಗೆ ನನ್ನನ್ನು ಒಳಗಾಗಿಸಿತು. ಅದರ ಪರಿಣಾಮವೇ ಈಗ ಓದುಗರ ಮುಂದಿಡುತ್ತಿರುವ ಈ ಕೃತಿ.

ಬಿಡುವಿಲ್ಲದ ಸಾಹಿತ್ಯಕ, ಶೈಕ್ಷಣಿಕ, ಬೌದ್ಧಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಮತ್ತು ಕನ್ನಡ ಸಾಹಿತ್ಯ ಲೋಕದ ಸಮಕಾಲೀನ ವಿಮರ್ಶಕರಲ್ಲಿ ಅತ್ಯಂತ ಹೆಸರಾದ ಮತ್ತು ಪ್ರಬುದ್ಧ ಚಿಂತಕರಾದ ಡಾ||

ನರಹಳ್ಳಿ ಬಾಲಸುಬ್ರಹ್ಮಣ್ಯಂ ಅವರು ನನ್ನೊಂದು ಪ್ರಾರ್ಥನೆಯನ್ನು ಮನ್ನಿಸಿ ನನ್ನ ಈ ಕೃತಿಗೆ ಒಂದು ಮುನ್ನುಡಿಯನ್ನು ಬರೆದುಕೊಟ್ಟು ತಮ್ಮ ಅಮೂಲ್ಯ ವೇಳೆಯಲ್ಲಿ ನನಗೊಂದಿಷ್ಟು ಅವಕಾಶ ಮಾಡಿಕೊಟ್ಟಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಇದನ್ನು ಪ್ರಕಟಿಸಲು ಮುಂದಾದ ಗ್ರಂಥಪಾಲಕರಾದ ಶ್ರೀ ಹಿರೇಮಠ ಅವರಿಗೆ ಮತ್ತು 'ಎಲ್. ಎನ್. ಜಿ ಪಬ್ಲಿಕೇಷನ್ಸ್' ನ ಸುನೀಲ್ ಅವರಿಗೆ, ಮುಖಪುಟವನ್ನು ಸುಂದರವಾಗಿ ರೂಪಿಸಿಕೊಟ್ಟ ಮೋನಪ್ಪ ಅವರಿಗೆ ನನ್ನ ಕೃತಜ್ಞತೆಗಳು.

*ಡಾ// ವಿಜಯಾ ಸುಬ್ಬರಾಜ್.*

# ಮುನ್ನುಡಿ

ಸಮಗ್ರ ಓದಿನ ಪರಿಕಲ್ಪನೆ ಇಂದಿನ ಬಹುಮುಖ್ಯ ಸಾಂಸ್ಕೃತಿಕ ಅಗತ್ಯವಾಗಿದೆ. ನಮ್ಮ ಅಧ್ಯಯನ ಕ್ರಮದಲ್ಲಿ ಎರಡು ಬಗೆಯ ಓದಿನ ಕ್ರಮ ನನಗೆ ಮುಖ್ಯವೆನಿಸಿದೆ. ಒಂದು ಸಮಗ್ರ ಓದು, ಮತ್ತೊಂದು ಸಾವಧಾನದ ಓದು. ಇದುವರೆಗಿನ ನಮ್ಮ ಅಧ್ಯಯನದ ಕ್ರಮವೇ ಒಂದು ರೀತಿ ಬಿಡಿ ಓದಿನ ಪರಂಪರೆಯಾಗಿ ಬಿಟ್ಟಿದೆ. ನಮ್ಮ ಹಳೆಗನ್ನಡ ಕಾವ್ಯಗಳನ್ನು ನಾವು ಸಂಗ್ರಹಗಳಲ್ಲಿ, ಹಲವೊಮ್ಮೆ ಆಯ್ದ ಭಾಗಗಳಲ್ಲಿ ಮಾತ್ರ ಓದಿ, ಒಟ್ಟಾರೆ ಕವಿಯ ಬಗ್ಗೆಯೇ ತೀರ್ಪು ನೀಡುವ ಉತ್ಸಾಹ ಪ್ರಕಟಿಸಿದ್ದೇವೆ. ಒಂದು ಕಾಲಕ್ಕೆ ಪಠ್ಯಕ್ರಮಕ್ಕೆಂದು ರೂಪಿತವಾದ ಆಯ್ದ ಭಾಗಗಳೇ ನಮ್ಮ ಅಧ್ಯಯನ ಕ್ರಮವನ್ನು ರೂಪಿಸಿಬಿಟ್ಟಿತು. ಆಧುನಿಕ ಸಂದರ್ಭದಲ್ಲೂ ನಮ್ಮ ಅಧ್ಯಯನದ ಕ್ರಮ ಇದಕ್ಕಿಂತ ಭಿನ್ನವೇನಲ್ಲ.

ಕುವೆಂಪು, ಬೇಂದ್ರೆ, ಪು.ತಿ.ನ., ಮಾಸ್ತಿ, ಕಾರಂತ - ಮೊದಲಾದ ನಮ್ಮ ನವೋದಯದ ಪ್ರಮುಖ ಲೇಖಕರನ್ನು ಈಗ ಸಮಗ್ರವಾಗಿ, ಸಾವಧಾನವಾಗಿ ಓದಲು ಸಾಧ್ಯವಾದರೆ ನವೋದಯದ ಬಗೆಗಿನ ನಮ್ಮ ಅನೇಕ ಪರಿಕಲ್ಪನೆಗಳು ಮರುಚಿಂತನೆಗೊಳಗಾಗ ಬೇಕಾಗುತ್ತದೆ. ಇದುವರೆಗಿನ ನಮ್ಮ ಅಧ್ಯಯನದಲ್ಲಿ ನಾವು ನವೋದಯ ಸಂದರ್ಭವನ್ನು ಏಕಾಕೃತಿಯ ನೆಲೆಯಲ್ಲಿ ಗ್ರಹಿಸಿದ್ದೇವೆ; ನವೋದಯದ ಭಿನ್ನ ನೆಲೆಗಳನ್ನು, ಆ ಸಂದರ್ಭದ ವೈವಿಧ್ಯವನ್ನು ನಾವಿನ್ನೂ ಪರಿಶೀಲಿಸಬೇಕಾಗಿದೆ. ಶೂದ್ರ ಸಮುದಾಯದಿಂದ ಬಂದ ಕುವೆಂಪು ಪ್ರಧಾನಧಾರೆಯ ಸಂಸ್ಕೃತಿಯೊಡನೆ ಮುಖಾಮುಖಿಯಾಗುವುದರ ಮೂಲಕ ತಮ್ಮ ಸೃಜನಶೀಲತೆಯನ್ನು ರೂಪಿಸಿಕೊಂಡರೆ, ಪ್ರಧಾನ ಸಂಸ್ಕೃತಿ ಮೂಲದಿಂದ ಬಂದ ಬೇಂದ್ರೆ ಜಾನಪದ ಸಂಸ್ಕೃತಿಯ ಸತ್ವವನ್ನು ಒಳಗೊಳ್ಳುವುದರ ಮೂಲಕ ತಮ್ಮ ಸಾಹಿತ್ಯದ ಸ್ವರೂಪವನ್ನು ರೂಪಿಸಿಕೊಂಡರು. ಇವರಿಬ್ಬರಿಗಿಂತ ಅತ್ಯಂತ ಭಿನ್ನ ವೈದಿಕ ಮೂಲದಿಂದ ಬಂದ ಪು.ತಿ.ನ. ಒಳಗಿನವರಾಗಿ ಆ ಸಂಸ್ಕೃತಿಗೆ ಮುಖಾಮುಖಿಯಾಗಿ ಕುವೆಂಪು ಬೇಂದ್ರೆಯವರಿಗಿಂತ ಬೇರೆಯದೇ ಆದ ರೀತಿಯಲ್ಲಿ ತಮ್ಮ

ಸೃಜನಶೀಲತೆಯನ್ನು ರೂಪಿಸಿಕೊಂಡರು. ದೇಸಿ ಪರಂಪರೆಯಿಂದ ಮಾತ್ರವಲ್ಲ, ಮಾರ್ಗಪರಂಪರೆಯಿಂದಲೂ ನಾವು ನಮ್ಮ ವರ್ತಮಾನವನ್ನು ಸಂಪನ್ನಗೊಳಿಸಬೇಕಾಗಿದೆ ಎಂಬ ವಿಶಿಷ್ಟ ಅಂಶವನ್ನು ಆಧುನಿಕೋತ್ತರ ಚಿಂತನೆಯ ಸಂದರ್ಭದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಪು.ತಿ.ನ. ಅವರ ಸಾಹಿತ್ಯ ನಮಗೆ ಮನಗಾಣಿಸುತ್ತದೆ. ಇಂಗ್ಲೀಷಿನ ಓದು, ನಮ್ಮ ಸಂಸ್ಕೃತಿಯ ಸಾರದಿಂದ ಪೋಷಿತವಾದ ಪು.ತಿ.ನ. ಅವರ ಹೃದ್ಯ ಪ್ರಪಂಚವನ್ನು ಹಾಳುಗೆಡವಲಿಲ್ಲ. ಬದಲಾಗಿ ಅಲ್ಲಿನ ಕೊರತೆಗಳನ್ನು ಪೂರೈಸಿ ಪೋಷಿಸಿತು. ಅಭಿರುಚಿ ಕುಶಲವಾಯಿತು, ಸಂವೇದನೆ ಸೂಕ್ಷ್ಮವಾಯಿತು. ಪರಂಪರೆಯನ್ನು ತಿರಸ್ಕರಿಸದೆ ಒಳಗಿನವರಾಗಿ ನಿಂತು, ಆದರೆ ಎಚ್ಚರದ ನೆಲೆಯಲ್ಲಿ ನೋಡುವುದನ್ನು ಸಾಧ್ಯವಾಗಿಸಿತು. ಭಾವ ಪ್ರಪಂಚಕ್ಕೆ ಚಿಂತನೆಯ ಎಳೆ ಸೇರಿಸಿತು.

ಡಾ॥ ವಿಜಯಾಸುಬ್ಬರಾಜ್ ಅವರ 'ಪು.ತಿ.ನ. ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಳು' ಈ ಹಿನ್ನೆಲೆಯಲ್ಲಿ ಒಂದು ಪ್ರಮುಖ ಅಧ್ಯಯನ. ಪು.ತಿ.ನ. ಅವರ ಗೀತನಾಟಕಗಳು ಎನ್ನುವಾಗ ಸಾಮಾನ್ಯವಾಗಿ ಅವರ ಅಹಲ್ಯೆ, ಗೋಕುಲ ನಿರ್ಗಮನ ಇಂತಹ ಒಂದೆರಡು ಕೃತಿಗಳನ್ನು ಗಮನಿಸಿ ಚರ್ಚಿಸುವುದು ರೂಢಿ. ಆದರೆ ಪು.ತಿ.ನ. ಇಪ್ಪತ್ತಮೂರು ಗೀತನಾಟಕಗಳನ್ನ ರಚಿಸಿದ್ದಾರೆ. 'ಸಮಗ್ರ ಗೇಯ ಕಾವ್ಯ ನಾಟಕಗಳು' ಎಂಬ ಹೆಸರಿನಲ್ಲಿ ಅವರ ಎಲ್ಲ ಗೀತನಾಟಕಗಳನ್ನು ಪು.ತಿ.ನ. ಟ್ರಸ್ಟ್ ಪ್ರಕಟಿಸಿದೆ. ಈಗ ಡಾ। ವಿಜಯಾ ಅವರು ಪು.ತಿ.ನ. ಅವರ ಎಲ್ಲ ಗೀತನಾಟಕಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಈ ಕೃತಿ ಪ್ರಕಟಿಸಿದ್ದಾರೆ. ಸಹಜವಾಗಿಯೇ ಇದುವರೆಗೆ ಚರ್ಚೆಗೆ ಬಾರದ ಅನೇಕ ಅಂಶಗಳು ಇಲ್ಲಿ ಪ್ರಸ್ತಾಪಿತವಾಗಿವೆ.

ಡಾ। ವಿಜಯಾಸುಬ್ಬರಾಜ್ ಅವರು ಕಥೆ, ಕವಿತೆ, ನಾಟಕ, ಪ್ರವಾಸಕಥನ ಮೊದಲಾದ ಪ್ರಕಾರಗಳಲ್ಲಿ ಪ್ರಯೋಗಶೀಲವಾಗಿ ಕೃತಿ ರಚನೆಯ ಮೂಲಕ ಸಾಹಿತ್ಯ ವಲಯದಲ್ಲಿ ಪರಿಚಿತವಾಗಿರುವಂಥವರು. ಕನ್ನಡದ ಗೀತನಾಟಕಗಳನ್ನು ಕುರಿತ ಅವರ ಸಂಶೋಧನಾ ನಿಬಂಧ ಮುಖ್ಯವಾದ ಒಂದು ಅಧ್ಯಯನಶೀಲ ಕೃತಿ. ಸ್ಪಂದನ, ಸಮಾಲೋಚನ ಎಂಬ ಅವರ ವಿಮರ್ಶಾ ಸಂಕಲನಗಳು ಡಾ। ವಿಜಯಾ ಅವರ ಆಳ

ಅಧ್ಯಯನ, ವಿಶ್ಲೇಷಣಾತ್ಮಕ ವ್ಯಾಖ್ಯಾನ, ಪರಿಣಾಮವಾಗಿ ಮೂಡುವ ಸಾಹಿತ್ಯಕ ನಿಲುವುಗಳನ್ನು ನಮಗೆ ಪರಿಚಯಿಸುತ್ತವೆ. ಜಿ.ಎಸ್. ಶಿವರುದ್ರಪ್ಪನವರು ಹೇಳುವಂತೆ 'ಸಾಹಿತ್ಯ ವಿಮರ್ಶೆಗೆ ಅಗತ್ಯವಾದ ಪರಂಪರೆಯ ಪರಿಜ್ಞಾನ, ವ್ಯಾಪಕವಾದ ಅಧ್ಯಯನ, ವಿವಿಧ ಚಾರಿತ್ರಕ ಒತ್ತಡಗಳಿಂದ ಕಾಲದಿಂದ ಕಾಲಕ್ಕೆ ಬದಲಾಗುವ ಸಾಹಿತ್ಯದ ಚಹರೆಗಳನ್ನು ಗುರ್ತಿಸುವ ಸೂಕ್ಷ್ಮ ಸಂವೇದನೆ, ಸಿದ್ಧಗ್ರಹಿಕೆ ಹಾಗೂ ತೀರ್ಮಾನಗಳನ್ನು ಪ್ರಶ್ನಿಸುವ ದಿಟ್ಟತನ, ಮತ್ತು ಕೇವಲ 'ಸಮಾಲೋಚನೆ' ನೆಲೆಯನ್ನು ದಾಟಿ ಬೇರೆ ಬೇರೆಯ ಆಯಾಮಗಳಿಗೆ ವಿಸ್ತರಿಸಿಕೊಳ್ಳುವ ವಿಮರ್ಶಕ ಪ್ರಜ್ಞೆ ಇತ್ಯಾದಿ ಲಕ್ಷಣಗಳಿಂದ ಕ್ರಿಯಾಶೀಲವಾಗಿರುವ ಅವರ ಬರವಣಿಗೆ ಗಂಭೀರ ಪರಿಶೀಲನೆಗೆ ನಮ್ಮನ್ನು ಒಡ್ಡುವಂಥದು. ಪ್ರಸ್ತುತ ಈ ಕೃತಿಯಲ್ಲೂ ಅವರ ವಿಶ್ಲೇಷಣಾತ್ಮಕ ಪ್ರತಿಭೆಯಿಂದ ಕೂಡಿದ ವಿಮರ್ಶನ ಪ್ರಜ್ಞೆಯನ್ನು ನಾವು ಕಾಣಬಹುದಾಗಿದೆ.

ಡಾ। ವಿಜಯಾ ಅವರದು ಬಹುಮುಖ ಆಸಕ್ತಿ. ಸಾಹಿತ್ಯಾಧ್ಯಯನದ ಜೊತೆಗೆ ಸಂಗೀತ, ನೃತ್ಯ, ನಾಟಕಗಳಲ್ಲೂ ಅವರಿಗೆ ಪರಿಶ್ರಮವಿದೆ. ಈ ಅಂಶವೂ ಗೀತನಾಟಕಗಳ ಅಧ್ಯಯನದಲ್ಲಿ ಅವರಿಗೆ ನೆರವಾಗಿದೆ.

'ಗೀತನಾಟಕ' ಪಾಶ್ಚಾತ್ಯರ ಅಪೆರಾ (Opera) ವನ್ನು ಹೋಲುತ್ತಾದರೂ ಅದಕ್ಕಿಂತ ಭಿನ್ನ. ಅಪೆರಾದಲ್ಲಿ ಗಾಯನವೇ ಪ್ರಧಾನ; ಕಾವ್ಯಾಂಶ ಅದಕ್ಕೆ ಪೂರಕವಷ್ಟೆ ; ಬಹಳಷ್ಟು ಸಲ ಗಾಯಕರೇ ಅಪೆರಾದ ರಚನೆಯನ್ನು ಮಾಡುತ್ತಾರೆ. ಆದರೆ 'ಗೀತ ನಾಟಕ'ದಲ್ಲಿ ಕಾವ್ಯ, ಸಂಗೀತ, ನೃತ್ಯ - ಒಂದು ಹದದಲ್ಲಿ ಸೇರುತ್ತದೆ. ಇದೊಂದು ಬಗೆಯ ವಿಶಿಷ್ಟ ಪಾಕ. ಡಾ। ವಿಜಯಾ ಅವರು ಪು.ತಿ.ನ. ತಮ್ಮ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿ ಗೀತನಾಟಕವನ್ನು ಆರಿಸಿಕೊಂಡಿದ್ದರ ಬಗ್ಗೆ ಆರಂಭದಲ್ಲಿ ಚರ್ಚಿಸುತ್ತಾರೆ. ಇವರ ಗೀತನಾಟಕಗಳಲ್ಲಿ ನಾಟಕಕಾರನಿಗಿಂತ ಸಮರ್ಥ ಕವಿಯನ್ನು ಸಂಗೀತಜ್ಞನನ್ನು ಕಾಣುವ ಸಾಧ್ಯತೆಯೇ ಹೆಚ್ಚು (ಪುಟ 3) ಎಂದು ಅವರು ಚರ್ಚಿಸುತ್ತಾರೆ. ಈ ಮಾತುಗಳು ಒಪ್ಪಬಹುದಾದಂಥವಾದರೂ ಪು.ತಿ.ನ. ಅವರ ವಸ್ತುವಿನ ಆಯ್ಕೆಯಲ್ಲಿಯೇ ನಾಟಕೀಯತೆಯ ಅಂಶವಿರುವುದನ್ನು ನಾವು ಗಮನಿಸಬಹುದು. ಅಹಲ್ಯೆ,

ಗೋಕುಲ ನಿರ್ಗಮನದಂತಹ ಅವರ ಶ್ರೇಷ್ಠ ಗೀತನಾಟಕಗಳ ವಸ್ತುವಿನ್ಯಾಸದಲ್ಲೇ ಪು.ತಿ.ನ. ಅವರ ನಾಟಕೀಯ ಪ್ರತಿಭೆ ವ್ಯಕ್ತವಾಗುತ್ತದೆ.

ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಿಂತ ಮನೋಲ್ಲಾಸವೇ ಮುಖ್ಯ ಎಂಬ ರೂಢಿಯ ನಂಬಿಕೆಯನ್ನು ಪುತಿನ ಅವರ ಗೀತನಾಟಕಗಳು ಹೇಗೆ ನಿರಾಕರಿಸುತ್ತವೆಂಬುದನ್ನು ಡಾ। ವಿಜಯಾ ಅವರು ವಿವರ ವಿಶ್ಲೇಷಣೆಯ ಮೂಲಕ ಕೃತಿಯ ಉದ್ದಕ್ಕೂ ಪ್ರತಿಪಾದಿಸುತ್ತಾರೆ. ತಾತ್ವಿಕತೆ ಪು.ತಿ.ನ. ಅವರಲ್ಲಿ ಕೃತಿಯ ಅಂತರ್ಗತ ಭಾಗವಾಗಿ ಪ್ರಕಟವಾಗುತ್ತದೆ ಎಂಬುದು ಅವರ ನಿಲುವು. ಗೀತನಾಟಕಗಳು ಭಾವಪ್ರಚೋದಕವೆಂಬುದು ನಿಜವಾದರೂ ಒಂದು 'ರಸಜಾಗರ' ಸ್ಥಿತಿಯನ್ನು ಅವು ನಿರ್ಮಾಣ ಮಾಡುವುದರ ಮೂಲಕ ನಮ್ಮನ್ನು ಚಿಂತನೆಗೆ ಹಚ್ಚುತ್ತವೆ ಎಂದು ಪು.ತಿ.ನ. ಭಾವಿಸುತ್ತಾರೆ. ಡಾ। ವಿಜಯಾ ಅವರು ಈ ಎಳೆಯನ್ನು ಹಿಡಿದು ಪು.ತಿ.ನ. ಅವರ ಗೀತನಾಟಕಗಳಲ್ಲಿ ವ್ಯಕ್ತವಾಗುವ ತಾತ್ವಿಕತೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ.

'ಅಹಲ್ಯೆ'ಯ ಆರಂಭದಲ್ಲಿ ಪು.ತಿ.ನ. ತಮ್ಮ ಆಪ್ತಗೆಳೆಯ ನಂ. ಶಿವರಾಮಶಾಸ್ತ್ರಿಗಳಿಗೆ ಇದನ್ನು ಅರ್ಪಿಸುತ್ತ ಅಹಲ್ಯೆ ರೂಪುಗೊಂಡ ಕ್ರಮವನ್ನು ವಿವರಿಸುತ್ತಾರೆ. ಪುತಿನ ಅವರದು ಮೂಲತಃ ಕವಿಹೃದಯ. ಆದರೆ ಕವಿಗೂ ತತ್ವಜ್ಞಾನಿಗೂ ಇಲ್ಲಿ ಸಂಘರ್ಷವೇರ್ಪಡುತ್ತದೆ. ಕವಿ ಹೇಳುತ್ತಾನೆ :

'ರಾಮಾಯಣದ ಕತೆ ಬಹು ಸರಳ
ಹೀಗೇಕಾಯಿತು ಎನ್ನುತ ಮರುಳ
ತರ್ಕಿಸಿ ತರ್ಕಿಸಿ ತೊಳಲುವೆಯೇಕೆ ?
ಬುದ್ಧಿಯ ಪೊರೆಯೊಳು ಮರೆಸುವೆ ಏಕೆ
ನನ್ನ ವಿಕಾಸವ, ಭಾವ ಪ್ರಕಾಶವ ?'

ಇದಕ್ಕೆ ಪು.ತಿ.ನ. ಹೇಳುತ್ತಾರೆ :

'ಕವಿ, ಇದು ಅನಿವಾರ್ಯ
ಎನ್ನಲು ತತ್ವಾನ್ವೇಷಣ ಕಾರ್ಯ
ಏನೇತಕೆ ಎಂಬುದೆ ಹವ್ಯಾಸ

ಇದನುಳಿದಾಗದು ಪದವಿನ್ಯಾಸ
ಆದರಿಂ ಸಹಿಸೆನ್ನೀ ಉಪಟಳವ
ಎಂತು ಕಂಪು ಬಿಡದಿಹುದೋ ದಳವ
ಪಂಕದೊಳೆಂತುಂಟಿತೊ ಪಂಕೇಜ
ಅಂತೆಯೆ ನಿನಗೆನ್ನಯ ಮನ ಸಹಜ.'

ಪು.ತಿ.ನ. ಅವರ ಗೀತನಾಟಕಗಳ ರಚನಾವಿನ್ಯಾಸವನ್ನು ಈ ಸಂವಾದ ಸ್ಪಷ್ಟವಾಗಿ ನಿರೂಪಿಸುತ್ತದೆ. ಮನೋಲ್ಲಾಸ ಮೂಲವಾದ ಗೀತನಾಟಕದ ಸ್ವರೂಪವನ್ನು ತಾತ್ವಿಕ ಚಿಂತನೆಗೆ ಬಳಸಿಕೊಂಡ ಬಗೆಯೇ ಪು.ತಿ.ನ. ಅವರ ಗೀತನಾಟಕಗಳ ವಿಶಿಷ್ಟತೆಯೆನ್ನಬಹುದು.

ಪು.ತಿ.ನ. ಅವರ ಗೀತನಾಟಕಗಳಲ್ಲಿ ತಾತ್ವಿಕತೆಯ ಸ್ವರೂಪ ಸಾಮಾನ್ಯವಾಗಿ 'ನಾಂದಿ' ಪದ್ಯಗಳಲ್ಲಿಯೇ ಸೂಚಿತವಾಗಿಬಿಡುತ್ತದೆ. 'ಅಹಲ್ಯೆ'ಯ ನಾಂದಿ ಪದ್ಯವನ್ನು ಗಮನಿಸಿ:

ಹುಲುಬಯಕೆ ಬಾ ಎನಲು, ಓ ಎಂದು ಬಾರದಿರು
ವಾತಾಪಿಯಂದದೊಳು ಬಾಳನೊಡೆದು
ಮೊಗ್ಗಿನೊಳು ಕಂಪಂತೆ ಚೇತದೊಳು ಬಳೆಯುತ್ತ,
ಸಮಯವರಿತರಳಿ ಬಾ ಒಲವೆ ನಲಿದು
ಇಂತೆಮ್ಮ ಬಿನ್ನಹವ ಮಾರ ಮನ್ನಿಸಲಿ
ಆಮೋದಕಾಗುವೊಲು ಬಾಳನಾಗಿಸಲಿ !

ಇದರ ವಿಸ್ತಾರವೇ, ವಿಶದವಾದ ನಿರೂಪಣೆಯೇ, 'ಮಾರ' ಮಂಗಳಕರನಾಗುವ ಕ್ರಮವೇ ಅಹಲ್ಯೆ ನಾಟಕದ ಸ್ವರೂಪ.

'ಗೋಕುಲ ನಿರ್ಗಮನ'ದ ನಾಂದಿ ಪದ್ಯವನ್ನು ಗಮನಿಸಿ:

'ಜಗದೀ ಮಾಯೆಯ ಹೊಳಲಿಡುತಿರುವಾ
ಮರೆ ದೈವದ ಕೊಳಲ
ನಮ್ಮೆದೆ ಅರೆಚಣವಾದರೂ ಲಾಲಿಸಿ
ನೀಗಲಿ ಭವದಳಲ'

ಇಲ್ಲಿಯೂ ಇಡೀ ನಾಟಕದ ವಸ್ತುವಿನ್ಯಾಸ, ಚಿಂತನೆ

ಸೂತ್ರಸ್ವರೂಪದಲ್ಲಿ ಸೂಚಿತವಾಗಿದೆ.

ಡಾ। ವಿಜಯಾ ತಮ್ಮ ಅಧ್ಯಯನದಲ್ಲಿ ಹೀಗೆ ಪು.ತಿ.ನ. ಅವರ ಗೀತನಾಟಕಗಳನ್ನು, ಅಂತರ್ಗತವಾಗಿರುವ ತಾತ್ವಿಕ ಚಿಂತನೆಯ ಸ್ವರೂಪವನ್ನು ವಿವರ ವಿಶ್ಲೇಷಣೆಯ ಮೂಲಕ ಸಮರ್ಥವಾಗಿ ವಿವರಿಸಿದ್ದಾರೆ. ಪು.ತಿ.ನ. ಅವರಲ್ಲಿ ಸೂಕ್ಷ್ಮ ಚಿಂತನೆ, ಸಮಕಾಲೀನ ಭಾರತದ ಸ್ಥಿತಿ - ಹೀಗೆ ಮುಖ್ಯವಾಗುತ್ತವೆಂಬುದನ್ನು ಅವರು ಗುರ್ತಿಸುತ್ತಾರೆ. ಒಂದು ಕಡೆ ಸಮೃದ್ಧ ಸಂಪತ್ತಿದೆ, ಗಾಂಭೀರ್ಯವಿದೆ ಆದರೆ ಜೀವಶಕ್ತಿಯೇ ಇಲ್ಲ. ಮತ್ತೊಂದು ಕಡೆ ಅಪಾರ ಚೈತನ್ಯವಿದೆ ಆದರೆ ಸ್ಪಷ್ಟ ಗುರಿಯಿಲ್ಲ, ಜೀವನವನ್ನು ಹಸನು ಮಾಡುವ ಶಕ್ತಿಯಿಲ್ಲ. ಅದು ಸಮಕಾಲೀನ ಭಾರತದ ಸ್ಥಿತಿ ಎಂದು ಪು.ತಿ.ನ. ಭಾವಿಸುತ್ತಾರೆ. ಪರಂಪರೆ-ಆಧುನಿಕತೆ ಇವುಗಳ ಸಹಯೋಗದ ಸಾಧ್ಯತೆಯ ಬಗ್ಗೆ ಅವರು ವ್ಯಕ್ತಪಡಿಸುವ ಚಿಂತನೆಯ ಎಳೆಗಳನ್ನು ವಿಜಯಾ ಅವರು ಗುರ್ತಿಸಲು ಅಲ್ಲಿ ಪ್ರಯತ್ನಿಸಿದ್ದಾರೆ.

ರಾಷ್ಟ್ರಹಿತ ಚಿಂತನೆ, ಆತ್ಮವಿಶ್ವಾಸ - ಪುತಿನ ಗೀತನಾಟಕಗಳಲ್ಲಿ ವ್ಯಕ್ತವಾಗುವ ತಾತ್ವಿಕತೆಯ ಸ್ವರೂಪವೆಂಬುದನ್ನು ಡಾ। ವಿಜಯಾ ಸುಬ್ಬರಾಜ್ ತಮ್ಮ ಅಧ್ಯಯನದಲ್ಲಿ ನಮಗೆ ಮನಗಾಣಿಸುತ್ತಾರೆ. 'ಸತ್ಯಾಯನ ಹರಿಶ್ಚಂದ್ರ' 'ವಿಕಟಕವಿ ವಿಜಯ' 'ಶ್ರೀರಾಮಪಟ್ಟಾಭಿಷೇಕ', 'ಕುಚೇಲ - ಕೃಷ್ಣ' ಮೊದಲಾದ ಗೀತನಾಟಕಗಳ ವಿಶ್ಲೇಷಣೆ ಅನೇಕ ಹೊಸ ಮಾತುಗಳನ್ನೊಳಗೊಂಡಿರುವುದನ್ನು ನಾವು ಗಮನಿಸಬಹುದಾಗಿದೆ.

ಅಹಲ್ಯೆ, ಗೋಕುಲ ನಿರ್ಗಮನದಂತಹ ಒಂದೆರಡು ಕೃತಿಗಳನ್ನು ಹೊರತುಪಡಿಸಿದರೆ ಪುತಿನ ಅವರ ಗೀತನಾಟಕಗಳ ಬಗ್ಗೆ ಕನ್ನಡ ವಿಮರ್ಶೆ ಅಷ್ಟಾಗಿ ಚರ್ಚಿಸಿದಂತಿಲ್ಲ ಡಾ। ವಿಜಯಾ ಅವರ ಈ ಕೃತಿ ಆ ಕೊರತೆಯನ್ನು ಸಮರ್ಥವಾಗಿ ತುಂಬಿದೆ. ಅವರ ಎಲ್ಲಾ ನಾಟಕಗಳ ವಿವರವಾದ ಅಧ್ಯಯನ ಒಂದೆಡೆ ದೊರಕಿದಂತಾಗಿದೆ. ಗೀತನಾಟಕಗಳ ರಚನಾವಿನ್ಯಾಸ, ಅವುಗಳಲ್ಲಿ ಅಂತರ್ಗತವಾಗಿರುವ ಚಿಂತನೆಯ ಸ್ವರೂಪ - ಇವುಗಳನ್ನು ಡಾ। ವಿಜಯಾ ಈ ಅಧ್ಯಯನದಲ್ಲಿ ವಿಸ್ತಾರವಾಗಿ ಅವಲೋಕಿಸಿದ್ದಾರೆ. ಇಂತಹ ಸಮಗ್ರ ಅಧ್ಯಯನಗಳು ಕನ್ನಡ ಸಂಸ್ಕೃತಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಉಪಯುಕ್ತ.

*ಡಾ। ನರಹಳ್ಳಿ ಬಾಲಸುಬ್ರಹ್ಮಣ್ಯ*

# ಗೀತನಾಟಕಗಳಲ್ಲಿ ಪು.ತಿ.ನ ಅವರ ತಾತ್ವಿಕತೆ

ಪು.ತಿ.ನ., ನಮ್ಮ ಸಮಕಾಲೀನ ಹಿರಿಯ ಕವಿಗಳಲ್ಲಿ, ಪರಂಪರೆಯಲ್ಲಿ ನಿಷ್ಠೆ, ಸನಾತನ ಸಂಸ್ಕೃತಿಯಲ್ಲಿ ಆಸ್ಥೆ, ದೇವರು ಧರ್ಮದ ಬಗ್ಗೆ ಆಸ್ತಿಕ್ಯತೆ, ರಸ ಪ್ರಜ್ಞೆ, ಗಂಭೀರ ಚಿಂತನೆ, ಸಾಮಾಜಿಕ ಕಾಳಜಿ, ಮಾನವ ಪ್ರೀತಿ,- ಇತ್ಯಾದಿಗಳನ್ನು ಏಕಕಾಲದಲ್ಲಿ ರೂಢಿಸಿಕೊಂಡ ಸೃಜನಮನಸ್ಸಿನ ಅನನ್ಯಕವಿ ಎನಿಸಿಕೊಂಡಿದ್ದಾರೆ. ಸಾಹಿತ್ಯದ ಯಾವುದೇ ಪ್ರಕಾರವಾದರೂ ಅದರ ಹಿನ್ನೆಲೆಯಲ್ಲಿ ಒಂದು ಗಂಭೀರವಾದ ತಾತ್ವಿಕ ನೆಲೆಗಟ್ಟು ಸಿದ್ಧವಾಗಿರುತ್ತದೆ. ಚಿಂತನೆಗಳು ಆಧುನಿಕವಾದರೂ ಸಾಂಪ್ರದಾಯಿಕವಾದ ಅಥವಾ ಹಿಂದಿನ ರೀತಿಯಲ್ಲಿ ಆಚ್ಛಾದ ಗೊಂಡಿರತ್ತವೆ.

ಕವಿ, ನಾಟಕಕಾರ, ವಿಮರ್ಶಕ, ಕತೆಗಾರ ಪ್ರಬಂಧಕಾರ- ಹೀಗೆ ಹಲವಾರು ವ್ಯಕ್ತಿಗಳನ್ನು ಒಳಗೊಂಡ ಪರಿಪೂರ್ಣ ವ್ಯಕ್ತಿಯಾಗಿದ್ದಾರೆ. ಕಾವ್ಯ ಸೃಷ್ಟಿಯನ್ನು ಎಷ್ಟು ಗಂಭೀರ ಪ್ರಕ್ರಿಯೆಯಾಗಿ ಭಾವಿಸಿದರೋ ಅದಕ್ಕಿಂತಲೂ ಹೆಚ್ಚು ಗಂಭೀರವಾಗಿ ತಮ್ಮನ್ನು ತೊಡಗಿಸಿಕೊಂಡದ್ದು ಆಶ್ಚರ್ಯಕರವೆನಿಸುವಂತೆ, ಗೀತನಾಟಕಗಳ ರಚನೆಯಲ್ಲಿ! ಕಾರಂತರನ್ನು ಬಿಟ್ಟರೆ, (ಕವನ ಸಂಕಲನಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ) ಗೀತನಾಟಕಗಳನ್ನು ಬರೆದವರು ಪು.ತಿ.ನ. ಅವರೇ! ಗೌರೀಶ ಕಾಯ್ಕಿಣಿ, ಮಾಸ್ತಿ, ತಿರುಕ, ಕುರ್ತಕೋಟಿ, ರಾಮಚಂದ್ರಶರ್ಮ, ಮುಂತಾದವರೂ ಗೀತನಾಟಕಗಳನ್ನು ಬರೆದಿರುವರಾದರೂ, ಅದು ವೈವಿಧ್ಯಕ್ಕಾಗಿ ಅಷ್ಟೇ! ಗೀತನಾಟಕ ಪ್ರಕಾರವನ್ನು ಒಂದು ಮಹತ್ವದ ಸೃಜನಶೀಲ ಅಭಿವ್ಯಕ್ತಿ-ಮಾಧ್ಯಮವಾಗಿ ಪರಿಗಣಿಸಿ ತೊಡಗಿಸಿಕೊಂಡವರು ಕಾರಂತರು ಮತ್ತು ಪು.ತಿ.ನ. ಕವಿಯಾಗಿ ಕಾವ್ಯ ಕರ್ಮದ ಬಗ್ಗೆ, ಕಾವ್ಯ ಸೃಷ್ಟಿಯ ಹಿಂದಿನ ತಾತ್ವಿಕತೆಯ ಬಗ್ಗೆ ಸ್ಪಷ್ಟನಿಲುವನ್ನು ತಳೆದಿದ್ದು ಕಾವ್ಯ ಗೀತ, ಗೀತನಾಟಕ

ಇತ್ಯಾದಿಗಳ ಬಗ್ಗೆ ಸ್ವತಂತ್ರವಾಗಿ ಅನುಸಂಧಾನಕ್ಕೆ ತೊಡಗುವುದರ ಮೂಲಕ ಒಂದೊಂದು ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಮಿತಿಗಳನ್ನು ವ್ಯಾಪಕ ಸಾಧ್ಯತೆಗಳನ್ನು ಬಲ್ಲರಾಗಿದ್ದರು.

ನಿರಂತರ ಚಿಂತನಶೀಲ ಮನಸ್ಸಿನ ಪು.ತಿ.ನ. ನವೋದಯ ಪರಂಪರೆಯ ಪ್ರಮುಖ ಕವಿತ್ರಯರಲ್ಲಿ ಒಬ್ಬರಾಗಿದ್ದು, ಅದೇ ಪರಂಪರೆಯನ್ನು ಮುಂದುವರೆಸಿಕೊಂಡು ಭಾವಗೀತೆ ಸಂಕಲನಗಳನ್ನು ಇನ್ನಷ್ಟು ಸಂಖ್ಯೆಯಲ್ಲಿ ಕೊಡುವ ಎಲ್ಲ ಸಾಧ್ಯತೆಗಳಿದ್ದರೂ ಗೀತನಾಟಕವೆಂಬ ದೃಶ್ಯಾಂಶ, ಶ್ರವ್ಯಾಂಶಗಳೆರಡನ್ನೂ ಸಮ ಪ್ರಮಾಣದಲ್ಲಿ ನಿರೀಕ್ಷಿಸುವ ಸಂಕೀರ್ಣ ಮಾಧ್ಯಮವನ್ನು ಆರಿಸಿಕೊಂಡದ್ದೇಕೆಂಬುದು ಎಲ್ಲರ ಕುತೂಹಲದ ಪ್ರಶ್ನೆಯಾಗಿದೆ. ಗೀತನಾಟಕಗಳ ರಚನೆಯ ಹಿಂದೆ ಒಂದು ಸುದೀರ್ಘವಾದ ಚಿಂತನ ಪರಂಪರೆ, ಗಂಭೀರವಾದ ಒಂದು ತಾತ್ವಿಕ ದೃಷ್ಟಿ ಇರುವುದು ಅವರ ಅನೇಕ ಲೇಖನಗಳಲ್ಲಿ ಹೇಳಿರುವುದರ ಮೂಲಕ ಮತ್ತು ಅವರೊಡನೆ ನಡಸುವ ಸಂದರ್ಶನಗಳ ಮೂಲಕ ಸ್ಪಷ್ಟವಾಗಿದೆ. ಭಾವ, ರಸ ಪ್ರಚೋದಕವಾದ ನಿಸರ್ಗ ಸೌಂದರ್ಯ ದರ್ಶನವೇ ನವೋದಯ ಕಾವ್ಯದ ಪ್ರಮುಖವಸ್ತು ಸಾಮಗ್ರಿಯಾಗಿದ್ದು, ನಿಸರ್ಗಕೇಂದ್ರಿತ ನೂರಾರು ಕವಿತೆಗಳನ್ನು ಪು.ತಿ.ನ. ಅವರು ರಚಿಸಿದ್ದರಾದರೂ ಅವೆಲ್ಲ ಕವಿತೆಗಳಲ್ಲಿ ಒಂದೊಂದು ಭಾವಸ್ಥಿತಿ ಮತ್ತು ತನ್ಮೂಲಕದ ಒಂದು ನಿರ್ದಿಷ್ಟ ತಾತ್ವಿಕ ಚಿಂತನ ದರ್ಶನವನ್ನು ಕಟ್ಟಿ ಕೊಡುವಷ್ಟಕ್ಕೆ ಸೀಮಿತವಾಗಿತ್ತು. ಅವರ ಪ್ರಕೃತಿ ಕೇಂದ್ರಿತ ಗೀತನಾಟಕಗಳಲ್ಲಿ ಪ್ರಕೃತಿ ದರ್ಶನದ ವ್ಯಾಪ್ತಿ, ವಿಸ್ತಾರಗಳು ಕವಿಗೆ ಪ್ರಕೃತಿ ಬಗೆಗಿನ ಎಲ್ಲ ಬಗೆಯ ಸೌಂದರ್ಯಾಭಿಭೂತ ಸ್ಥಿತಿಯ ಭಾವಗಳನ್ನು ಅದರ ಚೆಲುವಿನ ವಿವಿಧ ಆಯಾಮಗಳನ್ನು ಕಟ್ಟಿಕೊಡಲು ಅದರ ಸಂವಿಧಾನ ಚೌಕಟ್ಟು ಅಥವಾ ಭಿತ್ತಿ ಸಾಕಷ್ಟು Space (ಪ್ರದೇಶ) ಅನ್ನು ಒದಗಿಸಿತು. ಅಲ್ಲದೆ ಕಾವ್ಯದಲ್ಲಿರುವುದಕ್ಕಿಂತ ಹೆಚ್ಚಿನ ಅಭಿವ್ಯಕ್ತಿ ಸಾಧ್ಯತೆಗಳು, ರಸಾನುಭ ಸಾಧ್ಯತೆಗಳು ಇವೆಯೆಂಬ ಗಟ್ಟಿ ತರ್ಕದ ನೆಲೆ ಕಂಡುಕೊಂಡದ್ದರಿಂದ, ಮುಂದೆ ಗೀತನಾಟಕಗಳಿಗೇ ಸಂಪೂರ್ಣವಾಗಿ ಮೀಸಲಾಗಿರಿಸಿಕೊಂಡರು. ಕಾವ್ಯ ತತ್ವ ನಾಟಕ ತತ್ವಗಳ ಅನುಸಂಧಾನಕ್ಕೆ ಗೀತನಾಟಕ ಒಂದು ಒಳ್ಳೆಯ ಮತ್ತು ಸಮರ್ಥ ಮಾಧ್ಯಮವಾಯಿತು. ಗೀತನಾಟಕಗಳ ರಚನೆಗೆ ಪು.ತಿ.ನ. ಅವರಂತಹ ಮಹತ್ವದ ಪ್ರತಿಭಾವಂತ

ಕವಿಯ ಅವಶ್ಯಕತೆ ಇಲ್ಲವಾದರೂ ಪು.ತಿ.ನ. ಅವರ ಸಹಜ ಕವಿ ಪ್ರತಿಭೆ, ಭಾವನಾಂಶ ಚಿಂತನಾಂಶಗಳೊಂದಿಗೆ ಬೆಸೆದುಕೊಂಡಿದ್ದುದರಿಂದ ಅವರ ಗೀತನಾಟಕಗಳಿಗೆ ಒಂದು ವಿಶಿಷ್ಟ ಬಗೆಯ ಅನನ್ಯತೆ ಲಭ್ಯವಾಗಿದೆ. ಪ್ರಯೋಗದ ದೃಷ್ಟಿಯಿಂದ ಪು.ತಿ.ನ. ಅವರ ಗೀತನಾಟಕಗಳನ್ನು ಪರಿಗಣಿಸುವುದಕ್ಕಿಂತ ಅವುಗಳ ಸಾಹಿತ್ಯಿಕ ಮೌಲ್ಯ, ಚಿಂತನತೆ, ತಾತ್ವಿಕ ದೃಷ್ಟಿಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಮಹತ್ವದ ಕಲಾಕೃತಿಗಳಾಗಿವೆ.

ಇವರ ಗೀತನಾಟಕಗಳಲ್ಲಿ ನಾಟಕಕಾರನಿಗಿಂತ ಒಬ್ಬ ಸಮರ್ಥ ಕವಿಯನ್ನು, ಸಂಗೀತಜ್ಞನನ್ನು ಕಾಣುವ ಸಾಧ್ಯತೆಯೇ ಹೆಚ್ಚು. ಕವಿಯ ಬಗ್ಗೆ ಅವನ ಸೃಜನಶೀಲ ಪ್ರತಿಭೆಯ ಬಗ್ಗೆ ಅಪಾರ ಗೌರವವಿರಿಸಿಕೊಂಡ ಪು.ತಿ.ನ. ಕಠೋಪನಿಷತ್ತಿನಲ್ಲಿ ಉಕ್ತವಾದ ಕೆಳಗಿನ ಸಾಲುಗಳನ್ನು ಉದ್ಧರಿಸುತ್ತಾರೆ.

" ಪರಾಂಚಿಖಾನಿ ವ್ಯತೃಣತ್ ಸ್ವಯಂಭೂ
ಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್
ಕಶ್ಚಿದ್ಧೀರ: ಪ್ರತ್ಯಗಾತ್ಮಾನ ಮೈಕ್ಷತ್
ಅವೃತ್ತ ಚಕ್ಷುರಮೃತತ್ವಮಿಚ್ಛನ್"ಕಠೋಪನಿಷತ್"

[ತನ್ನನ್ನು ತಾನೇ ಸೃಷ್ಟಿಸಿಕೊಂಡ ಸ್ವಾಮಿ ಸ್ವಯಂಭೂ ಇಂದ್ರಿಯಗಳನ್ನು ಹೊರಮೊಗವಾಗಿರುವಂತೆ ಮಾಡಿದ. ಮನುಷ್ಯ ಹೊರಗಣದನ್ನೇ ಕಾಣುತ್ತಾನೆ. ಅಂತರಾತ್ಮನನ್ನು ಕಾಣಲಾರ, ಆವನೋ ಒಬ್ಬ ಧೀರ ಅಮೃತತ್ವಕ್ಕೆ ಬಯಸಿ ತನ್ನ ಕಣ್ಣು ಒಳಮೊಗವಾಗುವಂತೆ ಮಾಡಿದ ಪ್ರತ್ಯಗಾತ್ಮನನ್ನು ಕಾಣುತ್ತಾನೆ. ಅಂಥ ಧೀರರ ಸಾಲಿಗೆ ಸೇರಿದವನು ಕವಿ.]

ಕವಿಯ ಬಗ್ಗೆ ಇಷ್ಟೊಂದು ಗೌರವ, ಅವನ ಅಪ್ರತಿಮ ಸಾಮರ್ಥ್ಯ, ಒಳಗಣ್ಣಿನಿಂದ ಆತ್ಮದರ್ಶನ ಮಾಡಬಲ್ಲನೆಂಬ ನಂಬಿಕೆ ಇರಿಸಿಕೊಂಡದ್ದರಿಂದಲೇ 'ಕವಿ' ಗೀತನಾಟಕ ರಚನೆಯೂ ಸಾಧ್ಯವಾಯಿತು.

ಪು.ತಿ.ನ. ಅವರ ಗೀತನಾಟಕಗಳಲ್ಲಿನ 'ತಾತ್ವಿಕತೆ'ಯ ಅನುಸಂಧಾನಕ್ಕೆ ಹೊರಟಾಗ, ಮುಖ್ಯವಾಗಿ ಅವರ ತಾತ್ವಿಕತೆಯ ನಾಲ್ಕು

ಮುಖಗಳನ್ನು ಕಾಣುತ್ತೇವೆ, 'ಸೌಂದರ್ಯ', 'ರಸ,' ಭಕ್ತಿ ಮತ್ತು 'ಶಿವ' ತತ್ವಗಳು, ಬೌದ್ಧಿಕತೆ, ವೈಚಾರಿಕತೆ, ತರ್ಕಗಳೆಲ್ಲವೂ ಭಾವಾಂತರವಾಗಿ ಕಾಣಿಸಿಕೊಳ್ಳುತ್ತವೆ. ಸಾಂಪ್ರದಾಯಿಕ ಪರಿವೇಶದಲ್ಲಿ ಸುಳಿದಾಡುತ್ತವೆ. ಗೀತ ನಾಟಕಗಳಲ್ಲಿ ಭಾವಕ್ಕೆ ಶರಣಾದ ಬೌದ್ಧಿಕತೆ ಮಾತ್ರವೆ ಕಾಣಸಿಗುತ್ತದೆ. ಆಧುನಿಕ ವಿಮರ್ಶಾ ಮಾನದಂಡಗಳ ಮೂಲಕ ವೈಚಾರಿಕತೆ, ಬೌದ್ಧಿಕತೆಗಳ ಹುಡುಕಾಟಕ್ಕೆ ಇಲ್ಲಿ ಅವಕಾಶವಿಲ್ಲ. ಗೀತನಾಟಕಗಳ ರಚನೆಗೆ ಅವರದೇ ಒಂದು ಸೈದ್ಧಾಂತಿಕ ನೆಲೆಗಟ್ಟನ್ನು ಮೀಮಾಂಸೆಯನ್ನು ರೂಪಿಸಿಕೊಂಡಿದ್ದಾರೆ. ಗೀತನಾಟಕಗಳು ಮುಖ್ಯವಾಗಿ ಶ್ರವ್ಯೋದ್ದೇಶಿತ ಇಲ್ಲವೇ ಶ್ರವ್ಯ ದೃಶ್ಯೋದ್ದೇಶಿತ, ಆದ್ದರಿಂದ ಗೀತನಾಟಕಗಳನ್ನು ಕೇಳುವುದರಿಂದ ಮತ್ತು ಕೇಳುತ್ತ ನೋಡುವುದರಿಂದ ಶ್ರೋತೃಗಳ ಮತ್ತು ಶ್ರೋತೃ ಪ್ರೇಕ್ಷಕರ ಮೇಲೆ ಎಂತಹ ಪರಿಣಾಮವನ್ನು ಬೀರಬಹುದು, ಯಾವ ನೆಲೆಯ ರಸಾನುಭೂತಿಯನ್ನು ಒದಗಿಸಬಲ್ಲವು ಎಂಬುದರ ಚಿಂತನೆಯೇ ಮುಖ್ಯವಾಗುತ್ತದೆ. ಇಂತಹ ನಿರೀಕ್ಷೆಗಳ ಸಾಫಲ್ಯದ ಸಾಧ್ಯತೆ ಇರುವುದು ಗೀತನಾಟಕಗಳಿಗೆ ಆಯ್ದುಕೊಳ್ಳುವ ವಸ್ತು ಸಾಮಾಗ್ರಿ ತೀರಾ ಸಮಕಾಲೀನವಾಗಿರದ ವಾಸ್ತವದೂರವಾದ ಪುರಾಣಗಳಿಂದ ಮತ್ತು ಕಲ್ಪನಾಜಗತ್ತಿನಿಂದ ಬಂದುದಾಗಿರಬೇಕಾಗುತ್ತದೆ. ಭಾವ ಸಾಂದ್ರವಾದಷ್ಟೂ ಗೀತನಾಟಕಗಳು ಯಶಸ್ವಿಯಾಗಬಲ್ಲವು. ಪು.ತಿ.ನ. ಬಯಸುವುದು ಕಲೆಯ ಮೂಲಕ ಮನಸ್ಸಿನ ಪರಿಷ್ಕರಣ; ಶುದ್ಧೀಕರಣ. ನಮ್ಮ ಸ್ವಭಾವದಲ್ಲಿನ ಮಾಲಿನ್ಯವನ್ನು ಕಳೆದು ಉಲ್ಲಾಸವನ್ನು ತುಂಬಿಕೊಳ್ಳುವುದನ್ನು. ಇದು ಸಾಧ್ಯವಾಗಲು ಗೀತನಾಟಕಗಳು ಶೃಂಗಾರ, ಕರುಣೆ, ಶಾಂತರಸಗಳ ಮೂಲಕ ಸಹಕರಿಸುತ್ತವೆ ಎನ್ನುವುದು ಅವರ ನಿಲುವು. ಎಲ್ಲ ಕಲೆಗಳೂ ಜನರನ್ನು ಕೆಲಕಾಲವಾದರೂ ಅರಿಷಡ್ವರ್ಗದ ಹಿಡಿತದಿಂದ ಬಿಡಿಸುವುದಕ್ಕೇ ಇರುವುದಾದರೂ ಗೀತನಾಟಕಗಳು ತಮ್ಮ ಸಂಗೀತ ಭಾಷೆಯಿಂದ, ಶ್ರವಣ ಮಾಧುರ್ಯದಿಂದ ಮತ್ತಷ್ಟು ಪರಿಣಾಮಕಾರಿಯಾಗಿವೆ ಎನ್ನುತ್ತಾರೆ.

ಸಂಗೀತ ಸಾಹಿತ್ಯ (ಕಾವ್ಯ) ಗಳ ಸಮನ್ವಯದೊಂದಿಗೆ ಮೈತಳೆದ ಗೀತರೂಪಕಗಳು ಪು.ತಿ.ನ. ಅವರ ಆಪ್ತ ಮಾಧ್ಯಮವಾಯಿತು. ವೈಯಕ್ತಿಕವಾದ ಜೀವನದರ್ಶನ, ವಿಚಾರ ಭಾವಗಳ ನಿರೂಪಣೆಗೆ ಸಮರ್ಪಕವಾಗಿ ಒಗ್ಗಿದ ಕಾವ್ಯ ಮಾಧ್ಯಮವಿದ್ದರೂ ಅವಕ್ಕಿಂತಲೂ

ವಿಸ್ತಾರವಾದ ಗೀತರೂಪಕದ ಮೂಲಕ ಕಾವ್ಯ ಮಾಧ್ಯಮದ ಎಲ್ಲೆಗಳನ್ನು ಸಂಗೀತದ ಬಳಕೆಯಿಂದಾಗಿ ಮತ್ತಷ್ಟು ವಿಸ್ತರಿಸಿಕೊಂಡರು. ಕಾವ್ಯದ ಮೂಲಕವಾಗಿ ಸಾಧಿಸಲಾಗದ ಪರಿಣಾಮಗಳನ್ನು ಸಂಗೀತದಿಂದ ಸಾಧಿಸಲು ಸಾಧ್ಯವೆಂದು ಮನಗಂಡರು.

ಬಾಲ್ಯದಲ್ಲಿ ಲಭ್ಯವಾಗಿದ್ದ ಸಂಗೀತ ಪರಿಸರದಲ್ಲಿ ಬೆಳೆದ ಅವರಿಗೆ ಸಂಗೀತದಲ್ಲಿ ಅಂತರ್ನಿಹಿತವಾಗಿದ್ದ ಪರಿಣಾಮ ಸಾಧ್ಯತೆಗಳ ಹೊಳಹು, ಗೀತನಾಟಕದಂತಹ ಸಂಕೀರ್ಣ ಕಲಾರೂಪದ ಸೃಷ್ಟಿಗೆ ಪ್ರಚೋದನೆಯಾಯಿತು.

ಗೀತನಾಟಕಗಳು ಪು.ತಿ.ನ. ಅವರಿಂದ ದಿಢೀರನೆ ಸೃಷ್ಟಿಯಾದವುಗಳಲ್ಲ, ಅವುಗಳ ವಸ್ತು ಸಾಮಗ್ರಿ, ಸಂವಿಧಾನ, ಮಾಧ್ಯಮಗಳ ಬಗ್ಗೆ ಗಂಭೀರವಾಗಿ ಆಲೋಚಿಸಿದರು. ಈ ಮಾಧ್ಯಮ ರೂಪದಲ್ಲಿಯೂ ತಮ್ಮ ತಾತ್ವಿಕ ಚಿಂತನೆಗಳನ್ನು ಅಭಿವ್ಯಕ್ತಿಸಲು ಸಾಧ್ಯವೆಂಬ ನಂಬಿಕೆಯಿಂದಲೇ ಬರೆಯಹೊರಟರು. ಸಾಮಾನ್ಯವಾಗಿ ಗೀತನಾಟಕಗಳಲ್ಲಿ ಗಂಭೀರವಾದ ವೈಚಾರಿಕತೆ, ತಾತ್ವಿಕತೆಗಳು ಸಾಧ್ಯವಿಲ್ಲವೆಂಬ ಅಭಿಪ್ರಾಯವಿದೆ. ಆದರೆ ತಾತ್ವಿಕತೆ ಎಂಬುದನ್ನು ನಿರ್ದಿಷ್ಟವಾದ ಮಾತುಗಳಲ್ಲಿ ಇಂತು, ಹೀಗೆ ಎಂದು ವ್ಯಾಖ್ಯಾನಿಸಲು ಸಾಧ್ಯವೇ?

ತಾತ್ವಿಕತೆಯ ಅಭಿವ್ಯಕ್ತಿಗೆ ಇಂಥದ್ದೇ ಮಾಧ್ಯಮ, ಇಂಥದ್ದೇ ಭಾಷೆ ಇರಬೇಕೆಂಬ ನಿಯಮವಿದೆಯೇ ? ಎಂಬ ಪ್ರಶ್ನೆಗಳು ಸಹಜವಾಗಿ ಗೀತನಾಟಕ ಪ್ರಕಾರವನ್ನು ಸಮರ್ಥಿಸುವವರಿಂದ ಹೊರ ಹೊಮ್ಮುತ್ತವೆ. ಪ್ರಜ್ಞಾವಂತ, ಪ್ರತಿಭಾವಂತ, ಚಿಂತನಶೀಲ ಮನಸ್ಸಿನ ಯಾವುದೇ ಕವಿ, ಯಾವದೇ ಅಭಿವ್ಯಕ್ತಿಯ ಮಾಧ್ಯಮವನ್ನು ಆಯ್ಕೆಮಾಡಿಕೊಂಡರೂ ತಾತ್ವಿಕತೆಯೆನ್ನುವುದು ಅವನ ಅಭಿವ್ಯಕ್ತಿಯ ಅಂತರ್ಗತ ಭಾಗವಾಗಿರುತ್ತದೆ. ಹಾಗಾಗಿ ಗೀತನಾಟಕಗಳೇ ಆದರೂ ಗೀತನಾಟಕಗಳಿಂದ ತಾತ್ವಿಕತೆಯನ್ನು ಬೇರ್ಪಡಿಸುವುದು ಸಾಧ್ಯವಾಗುವುದಿಲ್ಲ. ತಾತ್ವಿಕತೆಯ ಸ್ವರೂಪ ಬೇರೆಯಾಗಬಹುದು ಅಷ್ಟೆ, ಪು.ತಿ.ನ. ಅವರ ಗೀತನಾಟಕಗಳಲ್ಲಿ ಪ್ರಧಾನವಾಗಿ ಅಡಗಿರುವ ಕವಿ, ಕಾವ್ಯ ಚಿಂತನೆಯಲ್ಲಿ ತೊಡಗಿರುತ್ತಾನೆ. ತನ್ನ ಸುತ್ತಲಿನ ಬದುಕನ್ನು, ಬದುಕಿನ ವೈವಿಧ್ಯಮಯ ಸನ್ನಿವೇಶಗಳನ್ನು,

ಸಂದರ್ಭಗಳನ್ನು, ವ್ಯಕ್ತಿಗಳನ್ನು, ದೃಶ್ಯಗಳನ್ನು ಗಮನಿಸುವಾಗ, ಪರಿಭಾವಿಸುವಾಗ ಕೇವಲ ಮೇಲು ನೋಟದ ಗ್ರಹಿಕೆಗಷ್ಟೇ ಸೀಮಿತವಾಗದೆ ತಾತ್ವಿಕ ಚಿಂತನೆಗೆ ಇಳಿಯುತ್ತಾನೆ, ಅಂತ: ಮಥನದಿಂದ, ಗಾಢ ಚಿಂತನೆಯಿಂದ ಹೊರಹೊಮ್ಮುವ ತಾತ್ವಿಕ ದರ್ಶನವನ್ನು ಕಟ್ಟಿ ಕೊಡುವ ರೀತಿಗಳಲ್ಲಿ ಬೇರೆಯಾಗುತ್ತಾನೆಯೇ ಹೊರತು, ತಾತ್ವಿಕತೆಯಿಂದ ಮುಕ್ತವಾಗಿಸುವುದಿಲ್ಲ. ತಾತ್ವಿಕ ಚಿಂತನೆಯ ಸ್ವರೂಪ ಕವಿಯಿಂದ ಕವಿಗೆ ಬೇರೆಯಾಗಬಹುದು. ಗೀತನಾಟಕಕಾರನ ಅನುಭವಕ್ಕೆ ಬರುವ ಯಾವುದೇ ವಿಷಯ, ವಿಚಾರ, ವಸ್ತು, ವ್ಯಕ್ತಿ ತಾತ್ವಿಕ ಅನುಸಂಧಾನಕ್ಕೆ ಪ್ರೇರಕವಾಗುತ್ತದೆ. ಆದರೆ ಕಾವ್ಯದಲ್ಲಿ ಪ್ರತಿಮೆ, ಪ್ರತೀಕಗಳ ಮೂಲಕ ಕವಿಯ ತಾತ್ವಿಕಚಿಂತನೆ ಹರಳುಗಟ್ಟಿ ದೊರೆಯುವ ಹಾಗೆ, ಗೀತನಾಟಕಗಳಲ್ಲಿ ಪ್ರತಿಮೆ, ಪ್ರತೀಕಗಳ ಬಳಕೆ ನಿಷಿದ್ಧ (ಸ್ವರೂಪದಿಂದಾಗಿ) ವಾದ್ದರಿಂದ, ತಾತ್ವಿಕ ಚಿಂತನೆಗಳಿದ್ದರೂ ಹಾಡುಗಳರೀತಿಯ ಸಂಭಾಷಣೆ, ಸಂಗೀತ, ಅಭಿನಯಗಳ ಭರದಲ್ಲಿ ಪ್ರೇಕ್ಷಕರ ಸುಲಭ ಗ್ರಹಿಕೆಗೆ ಬರುವುದಿಲ್ಲ. ದೃಶ್ಯ ರಮ್ಯತೆ, ಸಂಗೀತ ಮಾಧುರ್ಯಗಳು, ಭಾವ ಸ್ಪಂದನಗಳೇ ಹೆಚ್ಚಾಗಿ ಬೌದ್ಧಿಕ ಚಿಂತನೆ, ತರ್ಕಗಳು ಕೊಚ್ಚಿಹೋಗುತ್ತವೆ. ಅವುಗಳಿಗೆ ಅಲ್ಲಿ ಅವಕಾಶವೇ ಇರುವುದಿಲ್ಲ. ಈ 'ಕಲಾ ಮಾಧ್ಯಮ'ದಲ್ಲಿ ಪ್ರೇಕ್ಷಕನ ಕಿವಿಯ ಮೂಲಕದ ಕಣ್ಣಿನ ಮೂಲಕದ ಭಾಗವಹಿಸುವಿಕೆಯೇ ಮುಖ್ಯವಾಗುತ್ತದೆ. ಪು.ತಿ.ನ ಭಾವಿಸುವಂತೆ ಗೀತನಾಟಕಗಳು ಬುದ್ಧಿ ಪ್ರಚೋದಕವಲ್ಲ ; ಭಾವ ಪ್ರಚೋದಕಗಳು, ಕಾವ್ಯವಾಗಲೀ, ಗೀತನಾಟಕವಾಗಲೀ, ಅಥವಾ ಇನ್ನಾವುದೇ ಪ್ರಕಾರವಾಗಲೀ, ಪು.ತಿ.ನ.ರು ಅಪೇಕ್ಷಿಸುವುದು, ನಿರೀಕ್ಷಿಸುವುದು 'ರಸಜಾಗರ'ವನ್ನು. ಕಾವ್ಯ ಪ್ರಯೋಜನಗಳಲ್ಲಿ, ಅವರು ಒತ್ತುಕೊಡುವುದು 'ರಸಾನುಭೂತಿಗೆ' ಮತ್ತು 'ಸಹೃದಯ' ತತ್ವಕ್ಕೆ. ಹಾಗಾಗಿ ಕಾವ್ಯಕ್ಕೆ ಸಹೃದಯದ ಅಗತ್ಯವನ್ನು ಎಷ್ಟು ಪುರಸ್ಕರಿಸುತ್ತಾರೋ ಗೀತನಟಕಗಳಲ್ಲಿ 'ಪ್ರೇಕ್ಷಕ' ತತ್ವಕ್ಕೆ, 'ಶ್ರೋತೃ' ತತ್ವಕ್ಕೆ ಅಷ್ಟೇ ಮಹತ್ವ ನೀಡುತ್ತಾರೆ. ಗೀತನಾಟಕಗಳು ವಾಸ್ತವದೂರ, ಕೃತಕ ಎಂಬ ಆಕ್ಷೇಪಗಳೂ ಇವೆ. ಇದಕ್ಕೆ ಪು.ತಿ.ನ. ನೀಡುವ ಸಮರ್ಥನೆ ಏನು? ಎಂದಾಗ ವಾಸ್ತವದೂರತೆಯೇ 'ಗೀತನಾಟಕಗಳ 'ಯಶಸ್ಸಿನ ಗುಟ್ಟು ಎನ್ನುತ್ತಾರೆ.

ತಮ್ಮ ಕಾವ್ಯ ಕರ್ಮ ಪ್ರವೃತ್ತಿಯ ಬಗ್ಗೆ "ಅರಿತೋ ಅರಿಯದೆಯೋ ನಾನು ನನ್ನ ಕಾವ್ಯ ಕರ್ಮದಲ್ಲಿ ತೊಡಗಿರುವಾಗ ನನ್ನ ಕವಿತೆಗಳು ನನ್ನ ಭಾವೋದ್ರೇಕವನ್ನು ತೋರಿಸವು; ಅವು ನನ್ನ ಸ್ವಂತ ಇಷ್ಟ ಅನಿಷ್ಟಗಳನ್ನು ರಾಗ ದ್ವೇಷಗಳನ್ನು ನನ್ನ ಧ್ಯೇಯ ಹಾಗೂ ಆಕಾಂಕ್ಷೆಗಳನ್ನು ಸಹ ಅಷ್ಟಾಗಿ ರೇಖಿಸವು. ತನ್ನಿಂದ ತಾನು ಆದಷ್ಟು ಬಿಡಿಸಿಕೊಂಡು ನಿರ್ಯೋಗ ಕ್ಷೇಮಕಾತರನಾಗಿ ಹಾಯಾಗಿದ್ದ ವೇಳೆಗಳಲ್ಲಿ ನನಗೊದಗಿ ಬರುವ ಈ ಲೋಕದ ವಿಚಿತ್ರಾನುಭೂತಿಗಳ ಹೊರೆಯನ್ನು ಕಳೆದು ಕೊಳ್ಳುವುದಕ್ಕಾಗಿಯೇ ನಾನು ಕವಿತಾ ಪ್ರವೃತ್ತ ನಾಗುವುದು" ಎಂದು ಹೇಳಿದಂತೆಯೇ, ಗೀತನಾಟಕಗಳ ಹಿನ್ನೆಲೆಯಲ್ಲಿಯೂ ಒಂದು ಮನಃ ಸ್ಥಿತಿಯನ್ನು ಇರಿಸಿಕೊಂಡಿರುತ್ತಾರೆ, "ಮನಸ್ಸು ಒಂದು ಲಹರಿಯಲ್ಲಿದ್ದಾಗ ಸಂಗೀತ ಸ್ವರಗಳು ಅದಕ್ಕೆ ಬಂದು ಮುತ್ತಿಕೊಳ್ಳುತ್ತದೆ. ಅವು ನಾನು ಹಿಂದೆ ಕೇಳಿದ ಅನೇಕ ದಿವ್ಯಗಾನಗಳ ಪುನಃಸ್ಮರಣೆಯಲ್ಲಿ ಎಂದೂ ಕೇಳಿಲ್ಲದಂತೆ ತೋರುವ ಸ್ವರ ಸಾಂಗತ್ಯಗಳು ನಡುರಾತ್ರಿಯ ಮೌನದಲ್ಲಿ ಇವು ನನ್ನ ಕರ್ಣಾಕಾಶದಲ್ಲಿ ಸ್ಪಷ್ಟವಾಗಿ ಕೆಲವು ವೇಳೆ ಥಳಥಳನೆ ಹೊಳೆದಿವೆ ; ಎದ್ದು ಅವನ್ನು ಹಿಡಿದಿಡಲು ನಾನು ಮಾತುಗಳನ್ನು ಬೀಸಿರುವುದುಂಟು". ಎಂದು ಹೇಳಿರುವಲ್ಲಿ, ಗೀತನಾಟಕಗಳ ಹುಟ್ಟಿನ ಹಿಂದೆ ತನ್ಮಯಸ್ಥಿತಿಯಿದ್ದು, ಶಬ್ದಗಳು ಅನುಭವಕ್ಕೆ ಮಾತ್ರ ದಕ್ಕುವ ಅಮೂರ್ತವಾದ ಸಂಗೀತವನ್ನು ಮೂರ್ತವಾಗಿ ಹಿಡಿದಿಡಲು ಒದಗಿ ಬಂದ 'ಸಾಧನ' ವಾಗಿವೆ. ಸಂಗೀತ ಸಂಪೂರ್ಣವಾಗಿ ಭಾವ ಜಗತ್ತಿಗೆ ಸೇರಿದ ಕಲೆ. ಅವರ ನಂಬಿಕೆಯಲ್ಲಿ ಜ್ಞಾನವನ್ನು ನಿಶ್ಶೇಷವಾಗಿ ಭಾವಕ್ಕೆ ಪರಿವರ್ತಿಸುವ ಸಾಮರ್ಥ್ಯವಿರುವುದು ಸಂಗೀತಕ್ಕೆ ಮಾತ್ರ. ಬುದ್ಧಿ, ಜ್ಞಾನ, ವಿಚಾರಗಳೆಲ್ಲವೂ ಸಂಗೀತದಿಂದಾಗಿ' ಭಾವಾಂತರವಾಗುತ್ತವೆ. ಆದ್ದರಿಂದ ತಾತ್ವಿಕತೆ, ವೈಚಾರಿಕತೆಗಳು ಗೀತನಾಟಕಗಳಲ್ಲಿ ಲಭ್ಯವಾಗುವುದು ಸಂಗೀತ ಮತ್ತು ಕಾವ್ಯದ ಮೂಲಕ. ಬೌದ್ಧಿಕ ಚಿಂತನೆಯ ಮೂಲವಿರುವುದು 'ಭಾವ'ದಲ್ಲಿ. ಗೀತರೂಪಕಗಳು ವಿಸ್ತಾರವಾದ ಭಾವ ಪ್ರಪಂಚವನ್ನು ಉನ್ಮೀಲನಗೊಳಿಸುತ್ತವೆ. ಭಾವದ ವಿವಿಧ ಸ್ತರಗಳನ್ನೂ, ವೈವಿಧ್ಯಮಯವಾದ ಭಾವರಾಗಗಳನ್ನು ಇವು ಬಿಂಬಿಸುತ್ತವೆಯಾದರೂ ತತ್ವದರ್ಶನ, ವೈಚಾರಿಕತೆಗಳಿಂದ ಮುಕ್ತವಾಗಿಲ್ಲ ; ಶೂನ್ಯವಾಗಿಲ್ಲ, ಭಾವದ ಮಿಡಿತದ ಆಳದಲ್ಲಿ ವಿಚಾರದ ಮಿಂಚೂ ಇದೆ;

ತಾತ್ವಿಕತೆಯ ದರ್ಶನವೂ ಇದೆ. ಆದರೆ ಅವೆಲ್ಲವೂ ಸಾಂಪ್ರದಾಯಿಕತೆಯ ಹೊರಮೈಯಲ್ಲಿ ಕಾಣಿಸಿಕೊಳ್ಳುತ್ತವೆ. ತಾತ್ವಿಕತೆಯನ್ನು ಹೊರಗಿನಿಂದ ಆರೋಪಿಸುವುದಿಲ್ಲ, ಅದು ಉತ್ತಮ ದರ್ಜೆಯ ಕವಿ ನಾಟಕಕಾರರ, ಯಾವುದೇ ಬರಹದಲ್ಲಿಯೂ ಸಹಜವಾಗಿ ಅಂತರ್ಗತವಾಗಿರುತ್ತದೆ. ಅದನ್ನು ಅದರಿಂದ ಬೇರ್ಪಡಿಸುವುದು ಸಾಧ್ಯವಿಲ್ಲ. ಕಾವ್ಯಾತ್ಮಕತೆ, ಭಾವಾತ್ಮಕತೆ, ಸಂಗೀತಾತ್ಮಕತೆಯಲ್ಲಿಯೂ ಒಂದಲ್ಲ ಒಂದೆಡೆಯಲ್ಲಿ, ಒಂದಲ್ಲ ಒಂದು ರೀತಿಯಲ್ಲಿ ವೈಚಾರಿಕತೆ, ತಾತ್ವಿಕತೆಯ ಹೊಳಹುಗಳು ಇದ್ದೇ ಇರುತ್ತವೆ. ತಾತ್ವಿಕತೆಯನ್ನೇ ಹುಡುಕುವವರಿಗಾಗಿ ಕಾವ್ಯದ, ಗೀತನಾಟಕದ ಸ್ವರೂಪವನ್ನು, ಆಶಯವನ್ನು ಅಂದಗೆಡಿಸುವುದು ಸರಿಯಲ್ಲ.

ಪು.ತಿ.ನ. ಅವರು ಇಂತಹದೇ ಆಲೋಚನೆಯ ಬೆನ್ನಲ್ಲಿ ನಡೆದವರು. ಶುದ್ಧ ತಾತ್ವಿಕತೆ, ವೈಚಾರಿಕತೆಗಳು ತಮಗೆ ಸಾಧ್ಯವಿಲ್ಲ ; ಮತ್ತು ಸಹೃದಯರಿಗೆ, ಪ್ರೇಕ್ಷಕರಿಗೆ ಅದನ್ನು ಕೊಡುವುದು ತಮ್ಮ ಆಶಯವಲ್ಲ ಎಂದೇ ತಿಳಿದಿದ್ದವರು ಅದನ್ನು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ ಕೂಡಾ. "ನನ್ನ ಕೃತಿಗಳು ನಿಜವಾದ ಅರ್ಥದಲ್ಲಿ ಕವಿ-ಸಹೃದಯ ಪ್ರಣೀತವಾದವು ಸುಹೃತ್ ಪ್ರೇರಣೆಯಿಂದ ಸತ್ಯ ಶಿವ ಸೌಂದರ್ಯ ಮಾರ್ಗಚರನಾಗಿ ನಾನು ಪಟ್ಟು ಪಡೆದ ಜ್ಯೋತಿರ್ಮಯ ಲೋಕದ ಮಿನುಗುಗಳು ; ನನ್ನ ಕತೆ-ಕವಿತೆ-ಪ್ರಬಂಧ-ಭಾವನಾಚಿತ್ರ-ತಾತ್ವಿಕ ಚಿಂತನೆ ಹಾಗೂ ಗೀತರೂಪಕಗಳು ; ಅನುಕೃತಿಗಳಲ್ಲ, ಸ್ವಂತಿಕೆಗಳು ಕಾವ್ಯರಸಕ್ಕೂ ಶಾಸ್ತ್ರರಸಕ್ಕೂ ಒಲಿಯುವ ಸಹೃದಯರ ಸ್ನೇಹವಿರುವವರೆಗೂ ಬೆಳಗುವಂಥವು". ಈ ಮಾತುಗಳು ಅವರ ಯಾವುದೇ ಸೃಜನಶೀಲ ಬರಹಕ್ಕೆ ನೀಡುವ ಸಮರ್ಥನೆಯಾಗಿದೆ. ಕಾವ್ಯದಂತೆ ಸಂಗೀತವನ್ನೂ ಆಧ್ಯಾತ್ಮಿಕ ನೆಲೆಗೊಯ್ಯುತ್ತಾರೆ. ತಮ್ಮ ಕಾವ್ಯ ಪ್ರವೃತ್ತಿ ಶಮನೋನ್ಮುಖಿ ವಾಗಿದ್ದು ಮನಃ ಪ್ರಸಾದವನ್ನು ಕಲ್ಪಿಸುವ ಉದ್ದೇಶವನ್ನು ಮಾತ್ರವೇ ಹೊಂದಿವೆ ಎನ್ನುವ ಸ್ಪಷ್ಟೀಕರಣಗಳನ್ನು ಗಮನಿಸಿದಾಗ ಕಾವ್ಯ, ಸಂಗೀತಗಳೆರಡನ್ನೂ ಮೇಳವಿಸಿಕೊಂಡ ಗೀತನಾಟಕಗಳಲ್ಲಿನ 'ತಾತ್ವಿಕತೆ'ಯ, ಚಿಂತನೆಗಳ ಸ್ವರೂಪವನ್ನು ಗಮನಿಸುವುದಕ್ಕೆ ಬೇರೆಯೇ ಆದ ವಿಮರ್ಶಕ ದೃಷ್ಟಿ ಅನುಸಂಧಾನದ ರೀತಿಗಳು ಬೇಕಾಗುತ್ತವೆ. ಶ್ರೋತೃ ಪ್ರೇಕ್ಷಕ ರಂಜನೆಯನ್ನೇ ಪ್ರಧಾನವಾಗಿ ದೃಷ್ಟಿಯಲ್ಲಿರಿಸಿಕೊಂಡ ಈ ಗೀತನಾಟಕ

ಪ್ರಕಾರವಲ್ಲಿ ಶ್ರವ್ಯ ಸೌಂದರ್ಯ, ದೃಶ್ಯ ಸೌಂದರ್ಯಕ್ಕೆ ಹೆಚ್ಚಿನ ಒತ್ತುಕೊಡಬೇಕಾದ ಅಗತ್ಯ ಬೀಳುತ್ತದೆ. ಇದನ್ನು ಸಾಧಿಸಲು ಇಂಪಾದ ಸಂಗೀತ, ಮೋಹಕವಾದ ದೃಶ್ಯಗಳು, ವೇಷಾಲಂಕಾರಗಳು - ಇವುಗಳ ಕಡೆ ಹೆಚ್ಚಿನ ಗಮನ ಬೇಕಾಗುತ್ತದೆ.

ಪು.ತಿ.ನ.ರ ಮನೋಧರ್ಮ ಎಂತಹುದೆಂದರೆ, ಅವರು ಪ್ರತಿಕ್ಷಣವೂ ಕಾಣುವ ಪ್ರತಿ ವಸ್ತುವೂ ಸುಂದರವಾಗಿರಬೇಕೆಂದು ಅಪೇಕ್ಷಿಸುತ್ತಾರೆ. ಒಳಿತು ಕೆಡುಕಗಳ ದ್ವಂದ್ವ ಸ್ಥಿತಿಯಲ್ಲಿ ಅವರಿಗೆ ಗೋಚರವಾಗುವುದು ಒಳಿತು ಮಾತ್ರವೇ. ಸುಂದರವಾದ್ದನ್ನು ಕಾಣಬಯಸಿದಂತೆ, ಅಭಿವ್ಯಕ್ತಿಯೂ ಸುಂದರವಾಗಿರ ಬೇಕೆನ್ನುತಾರೆ. ಇಂತಹ ಸೌಂದರ್ಯ ಪ್ರಜ್ಞೆ ತಮಗೆ ಸಾಧ್ಯವಾದದ್ದು ಪರಂಪರೆಯಿಂದ ಎಂಬುದನ್ನು ದೃಢವಾಗಿ ನಂಬಿದ್ದಾರೆ. ನಾದ ಸೌಂದರ್ಯ, ಶಬ್ದ ಸೌಂದರ್ಯ, ದೃಶ್ಯ ಸೌಂದರ್ಯಗಳು, ಏಕಕಾಲದಲ್ಲಿ ಸಾಧ್ಯವಾಗಿಸುವಂಥಾದ್ದು 'ಗೀತನಾಟಕಗಳು' ಎಂದು ಬಲವಾಗಿ ನಂಬಿದ್ದರಿಂದರಿಂದಲೇ, ಬಿಡಿ ಬಿಡಿ ಭಾವಗೀತೆಗಳನ್ನು ರಚಿಸುವುದನ್ನು ಬಿಟ್ಟು, 'ಕಾವ್ಯ-ಸಂಗೀತ'ಗಳ ಬಗೆಗಿನ ತುಡಿತವನ್ನು ತಣಿಸಿಕೊಳ್ಳಲು ಪೂರ್ತಿಯಾಗಿ ಗೀತನಾಟಕಕಾರರಾಗಿ ರೂಪಾಂತರಗೊಂಡರು. ಭಕ್ತಿ ಮನೋಧರ್ಮ, ಸೌಂದರ್ಯ ಪ್ರಜ್ಞೆ, ರಸಾಸ್ತ್ಯಿಕ್ಯ, ಸತ್ಯ-ಶಿವ ಚಿಂತನೆ, ಕ್ವಚಿತ್ತಾಗಿ ಮೊಳೆತ ರಾಜಕೀಯ, ಸಾಮಾಜಿಕ ಪ್ರಜ್ಞೆ- ಇವೆಲ್ಲಕ್ಕೂ ಗೀತನಾಟಕಗಳು ವಿಶಾಲಭಿತ್ತಿಯನ್ನು ಕಲ್ಪಿಸಿದವು. ಪು.ತಿ.ನ. ಅವರ ಗೀತನಾಟಕಗಳು ಪ್ರತಿಮೆ ಪ್ರತೀಕಗಳಿಗೆ ಹೊರತಾಗಿ ಉಳಿದೂ, ಸರಳ ಗ್ರಹಿಕೆಗೆ ದಕ್ಕುವಂತಹ 'ತಾತ್ವಿಕತೆ'ಯನ್ನು ಪ್ರಕೃತಿ, ಪುರಾಣವಸ್ತು, ಸಾಮಾಜಿಕ ಸನ್ನಿವೇಶಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಲು ಹೊರಟಿದ್ದಾರೆ.

ಆದ್ದರಿಂದ ಅವರ ಗೀತನಾಟಕಗಳಲ್ಲಿನ ತಾತ್ವಿಕತೆಯ ಸ್ವರೂಪವನ್ನು ಅವರ ವಸ್ತುವೈವಿಧ್ಯತೆಯ ವಿಶ್ಲೇಷಣೆಯೊಂದಿಗೆ ಗುರುತಿಸ ಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ, ಅವರು ಬರೆದ ಇಪ್ಪತ್ತೆರಡು ಗೀತ ನಾಟಕಗಳನ್ನು ವಸ್ತು ಕೇಂದ್ರಿತ ಆಧಾರದ ಮೇಲೆ, ಕಾವ್ಯ ಪುರಾಣ ಗಳಾಧಾರಿತ ಗೀತನಾಟಕಗಳು, ಪ್ರಕೃತಿಯಾಧಾರಿತ ಗೀತನಾಟಕಗಳು

ಸಾಮಾಜಿಕ, ರಾಜಕೀಯ, ಕಲ್ಪನಾಧಾರಿತ ಗೀತನಾಟಕಗಳೆಂದು ವಿಂಗಡಿಸಬಹುದು.

ಪ್ರಕೃತಿಯಾಗಲೀ, ಪುರಾಣ-ಕಾವ್ಯ ವಸ್ತುವಾಗಲೀ ಕಲ್ಪನಾಧಾರಿತವೇ ಆಗಲಿ, ಆಯ್ದುಕೊಂಡ ವಸ್ತು, ಸಂವಿಧಾನಾನು ಗುಣವಾದ 'ತಾತ್ವಿಕ ಚಿಂತನೆ 'ಯ ನೆಲೆಗಟ್ಟಿದೆ, ಅವುಗಳಲ್ಲಿ.

ಇಷ್ಟು ಸಂಖ್ಯೆಯಲ್ಲಿ ರಚಿಸಿದ ಗೀತನಾಟಕಗಳಲ್ಲಿ ಹೆಚ್ಚಿನವು ಪುರಾಣ, ಇತಿಹಾಸ, ರಾಮಾಯಾಣ, ಮಹಾಭಾರತಗಳನ್ನು ಆಧರಿಸಿ ಬರೆದಂಥವುಗಳು, ಸುಮಾರು ನಲವತ್ತರ ದಶಕದಿಂದಲೇ ಪ್ರಾರಂಭವಾದ ಅವರ ಗೀತನಟಕರಚನೆ ನಿರಂತರವಾಗಿ ಮುಂದುವರೆಯಿತು. ತಮ್ಮ ಮನೋಧರ್ಮಕ್ಕೆ, ನಿರೀಕ್ಷಿತ ಉದ್ದೇಶಗಳ ಸಾಫಲ್ಯಕ್ಕೆ ಹೇಳಿ ಮಾಡಿಸಿದಂತಹ 'ಪ್ರಕಾರ'ವಾಯಿತು ಗೀತನಾಟಕ. ಅದರಲ್ಲಿಯೂ ಪೌರಾಣಿಕ ಗೀತನಾಟಕಗಳ ರಚನೆಯ ಹಿಂದೆ ಅವರ ಆಸ್ತಿಕ ಮನಸ್ಸು, ನಮ್ಮ ಪುರಾಣ, ಕಾವ್ಯ ಪರಂಪರೆಯ ಬಗೆಗೆ ಇದ್ದ ಶ್ರದ್ಧೆ, ಪೌರಾಣಿಕ ಪಾತ್ರ, ಸನ್ನಿವೇಶಗಳು ಇರುವ ಪ್ಲೆಕ್ಸಿಬಿಲಿಟಿ, ವ್ಯಕ್ತಿ ನಿರಪೇಕ್ಷತೆ, ಸಾರ್ವಕಾಲಿಕತೆ, ವಾಸ್ತವ ದೂರತೆಯಿಂದ ಅದಕ್ಕಿರುವ ಕಲ್ಪಕ ರಮ್ಯತೆ, ಸಮಕಾಲೀನಕ್ಕೂ ಒಗ್ಗಿಸಿಕೊಳ್ಳಬಹುದಾದ ಅಂತಃ ಶಕ್ತಿ (potential), ಎಲ್ಲಕ್ಕಿಂತ ಹೆಚ್ಚಾಗಿ ಅವುಗಳಲ್ಲಿನ ಕಲಾತ್ಮಕತೆಗಳು ಅತಿ ಪ್ರಿಯವೆನಿಸಿದ್ದು, ಹೀಗೆ ಇಷ್ಟೆಲ್ಲ ಅಂಶಗಳು ಪೌರಾಣಿಕ ಕಥಾಕೇಂದ್ರಿತ ಗೀತನಾಟಕಗಳ ರಚನೆಯ ಹಿಂದೆ ಕೆಲಸಮಾಡಿವೆ.

ಪುರಾಣಗಳನ್ನು ಹಳೆಯವೆಂದು ಅಪ್ರಸ್ತುತವೆಂದು ಅವಾಸ್ತವವೆಂದು ನಿರಾಕರಿಸುವ, ಮೂಗು ಮುರಿಯುವ ಪ್ರಕ್ರಿಯೆ ನಮ್ಮದಾಗಿರುವ ಈ ಕಾಲದಲ್ಲಿ ಪು.ತಿ.ನ. ಅವರ 'ಪುರಾಣಶ್ರದ್ಧೆ'ಗೆ ಅವರ ಮಡಿವಂತಿಕೆಯಲ್ಲಿ, ಅತ್ಯಂತ ಆಧುನಿಕವಾದ್ದನ್ನು, ಸಮಕಾಲೀನ ವಾದ್ದನ್ನು ಪುರಾಣಗಳು ಬಿಂಬಿಸಬಲ್ಲವು ಎನ್ನುವ ನಂಬಿಕೆ ಅವರದಾಗಿದೆ. ಗೀತನಾಟಕಗಳಲ್ಲಿ ಮಾತ್ರವಲ್ಲದೆ, ತಮ್ಮ ಕಾವ್ಯದಲ್ಲಿಯೂ ಪುರಾಣ ಪ್ರತಿಮೆ, ಸನ್ನಿವೇಶಗಳನ್ನು ಧಾರಾಳವಾಗಿ ಬಳಸಿದ್ದಾರೆ. ಪುರಾಣಗಳ ಬಗ್ಗೆ ತಮ್ಮ ವಿಚಾರಗಳು, ನಿಲುವುಗಳು ಮತ್ತು ಪುರಾಣವನ್ನು ತಾವು ಹೆಚ್ಚಾಗಿ

ನೆಚ್ಚಿಕೊಳ್ಳಲು ಕಾರಣವೇನೆಂಬುದನ್ನು ಧ್ವನಿಸುವಂತೆ, ಕವಿ. ಜಿ.ಎಸ್.ಎಸ್. ಅವರಿಗೆ ನೀಡಿದ ಸಂದರ್ಶನದ ಸಂದರ್ಭದಲ್ಲಿ ಅವರಾಡಿದ ಮಾತುಗಳು ಹೀಗಿವೆ :-

"Legend is always with you ...... Legend is a thing which is always with you. but which has never happened"

"ಪುರಾಣಕಾಲವೆಂದು ಗುರುತಿಸಿ ಆಗ ನಡೆದ ಘಟನೆ, ಸನ್ನಿವೇಶ ಬದುಕಿದ್ದ ವ್ಯಕ್ತಿಗಳು ಎಲ್ಲ ಕಾಲಕ್ಕೂ ಇರುವವರೇ. ಹಾಗಿರುವಾಗ ಈ ಕಾಲದ್ದನ್ನೇ, ಈ ಕಾಲದ ಸಂಭೂತಿಗಳನ್ನೇ ಪೌರಾಣಿಕ ವ್ಯಕ್ತಿಗಳ ಮೂಲಕ ಹೆಚ್ಚು ಗಾಢವಾಗಿ, ಹೆಚ್ಚು ರಾಗಯುಕ್ತವಾಗಿ, ಹೆಚ್ಚು ಸ್ಪಷ್ಟವಾಗಿ ಹೇಳೋಕೆ ಸಾಧ್ಯ"-.

ಮೇಲಿನ ಈ ಎಲ್ಲ ಮಾತುಗಳೂ ಪು.ತಿ.ನ. ಅವರಿಗೆ ಪುರಾಣಗಳ ಬಗ್ಗೆ ಎಷ್ಟು ಖಚಿತವಾದ ನಿಲುವಿತ್ತು ಎಂಬುದನ್ನು ಸ್ಪಷ್ಟಪಾಗಿಸುತ್ತದೆ. ಪುರಾಣ, ಕಾವ್ಯ, ಯಾವುದಾದರೂ ಅವರ ಮೇಲೆ ಹೆಚ್ಚಿನ ಪ್ರಭಾವ ಬೀರಿದ್ದು ರಾಮ, ಕೃಷ್ಣ ವ್ಯಕ್ತಿಗಳು. ಅದರಲ್ಲೂ ಕೃಷ್ಣನ ಬಗ್ಗೆ ಒಂದು ಗಾಢವಾದ ವ್ಯಸನ, ಅವರ ಸೃಜನಶೀಲ ಮನಸ್ಸಿನಾಳದಲ್ಲಿ 'ಕೃಷ್ಣಪ್ರಜ್ಞೆ' ನಿರಂತರವಾಗಿ ಕೆಲಸಮಾಡುತ್ತಿರುತ್ತದೆ. ಹಾಗಾಗಿ ಗೀತ ನಾಟಕಗಳನ್ನು ಬರೆಯುವಾಗ ರಾಮನ ವ್ಯಕ್ತಿತ್ವ ಕೃಷ್ಣನ ವ್ಯಕ್ತಿತ್ವಗಳಲ್ಲಿ ನಿಕ್ಷಿಪ್ತವಾದ ಜೀವನ ಮೌಲ್ಯಗಳು, ಆದರ್ಶಗಳು ಅವರನ್ನು ಪ್ರಬಲವಾಗಿ ಪ್ರಚೋದಿಸಿವೆ. ಅವರ ಪ್ರಮುಖ ಗೀತನಾಟಕಗಳಾದ ಅಹಲ್ಯೆ, ಶಬರಿ, ಹರಿಣಾಭಿಸರಣ, ರಾಮೋದಯಂ, ಸೀತಾಪರಿಣಯಂ, ಪಾದುಕಾ ಪಟ್ಟಾಭಿಷೇಕಂ, ಯಕ್ಷಗಾನ ಮೊದಲಾದವು ಶ್ರೀರಾಮನ ಬದುಕಿನಲ್ಲಿನ ಸಂಗತಿಗಳಾಗಿವೆ; ಘಟನೆಗಳಾಗಿವೆ. ಒಂದು ರೀತಿಯಲ್ಲಿ ಇವೆಲ್ಲವೂ ರಾಮಾಯಣ ಚಕ್ರದ ವ್ಯಾಪ್ತಿಯಲ್ಲಿ ಬರುವಂತಹವು

ಒಂದೊಂದು ನಾಟಕವೂ ಚಿಕ್ಕ ಚಿಕ್ಕದಾಗಿದ್ದು ಕಥೆಯ ಒಂದು ಸಣ್ಣ ಎಳೆಯನ್ನು ಮಾತ್ರವೇ ಹೊಂದಿದೆ. ಹಾಗಾಗಿ ಬಿಡಿ ಬಿಡಿಯಾಗಿ ತಾತ್ವಿಕ ಚಿಂತನೆಗಳ ಹುಡುಕಾಟ ಬಹುಶಃ ಸಾಧ್ಯವಾಗಲಾರದು.

ಶ್ರೀರಾಮನ ವ್ಯಕ್ತಿತ್ವದಲ್ಲಿನ ಸಂಕೀರ್ಣತೆ ಅವನ ಬದುಕಿನಲ್ಲಿ ಎದುರಾದ ದ್ವಂದ್ವ ಸ್ಥಿತಿಗಳು ವಚನ ಪರಿಪಾಲನೆಗೆ ಕಟಿಬದ್ಧನಾಗಿ ಹೊರಟವನು, ತಾನೂ ಸಂದಿಗ್ಧ ಸಂಕಷ್ಟಗಳಿಗೆ ಒಳಗಾಗುವುದೇ ಅಲ್ಲದೆ, ಸಂಕಷ್ಟಗಳಿಗೆ ಒಳಗಾದವರನ್ನೂ ಉದ್ಧಾರಮಾಡುತ್ತಾ ಸಾಗುವ ಅವನ ಉದ್ಧಾತ್ತ ವ್ಯಕ್ತಿತ್ವ ಮಹಾನ್ ವ್ಯಕ್ತಿತ್ವಗಳಮೂಲಕ ಆದರ್ಶಮಾನವನ ಸಂಕೇತವಾಗುತ್ತಾನೆ.

'ಹರಿಣಾಭಿಸರಣ' ಸ್ವರ್ಣ ಜಿಂಕೆಯನ್ನು ಬಯಸಿದ ಸೀತೆಯ ಬಯಕೆಯನ್ನು ಪೂರೈಸಲು ಅದರ ಬೆನ್ನಟ್ಟಿ ಹೋದ ರಾಮನ ಕಥೆ, ರಾವಣನಿಂದ ಸೀತೆಯ ಅಪಹರಣ ಇಷ್ಟೇ ಇದರ ಕಥಾಂಶವಾದರೂ, ಇಲ್ಲಿ 'ನಿಸರ್ಗ ಮತ್ತು ಮನುಷ್ಯ'ನ ಅನನ್ಯ ಸಂಬಂಧ, ಕಾಡಿನ ಮಲೆ, ಬನ, ನದಿ, ಹೂವು, ಪಶು ಪಕ್ಷಿಗಳೊಂದಿಗೆ ಆತ್ಮೀಯವಾಗಿ ಬಾಳುತ್ತ ತನ್ನ ಒಂಟಿತನವನ್ನು ಮರೆಯುವ ಸೀತೆಯ ಮೂಲಕ ಕಾಣಿಸುತ್ತಾರೆ. ರಾಮ, ಲಕ್ಷ್ಮಣ, ಸೀತೆ, ಪುರಾಣ ವ್ಯಕ್ತಿಗಳಾದರೂ ಸಾಮಾನ್ಯರಂತೆ ನಮ್ಮ ನಡುವಿನ ವ್ಯಕ್ತಿಗಳಂತೆ ಕಷ್ಟ ಸುಖಗಳಿಗೆ ಗುರಿಯಾಗುತ್ತಾರೆ. ವಿಧಿ, ಕೇಡು ಎಂಬುದು ಯಾರನ್ನೂ ಬಿಡದು. ಕೇಡುಗಳು ಕೇಡುಗಳಾಗಿ ಬಂದರೆ ಗುರುತಿಸಲು, ಪರಿಹರಿಸಿಕೊಳ್ಳಲು ಸಾಧ್ಯ ಆದರೆ ಅವೇ ಒಳಿತಿನ ಸೋಗಿನಲ್ಲಿ ಬಂದಾಗ ಸಮಸ್ಯೆ ಉದ್ಭವಿಸುತ್ತದೆ. ಸ್ವರ್ಣ ಜಿಂಕೆ ಸೃಷ್ಟಿಯಲ್ಲಿ ಸಾಧ್ಯವಿಲ್ಲ. "ಮನುಜರ ಭೀತಿಯ ತೋರದ ರೀತಿ" ಕಾಡಿನರೂಢಿಯ ತಪ್ಪಿದ ರೀತಿಗಳು ಅವನಿಗೆ ಮಾಯಾಮೃಗವೆಂಬ ಅನುಮಾನಕ್ಕೆ ದಾರಿಮಾಡುತ್ತವೆ.

"ಕೆಟ್ಟುದದು ಕೆಟ್ಟರೂಪದೊಳೆ ಬರಲು
ಸುಲಭವದು ಪರಿಹರಿಸಲು
ಶಿವದ ಸೋಗಿನೊಳಶಿವ ವಂಚಿಸ ಬರೆ
ದುಷ್ಕರವದು- ಪಶಮಿಸಲು"-
ಎನ್ನುವ ಚಿಂತೆ ಅವನದು,

ಶುಭಾ ಶುಭಗಳ ಚಿಂತನೆ ಹೊಸ ದಿಕ್ಕನ್ನು ಹಿಡಿದಿದೆ.

'ಶಬರಿ'ನಾಟಕದಲ್ಲಂತೂ, ಶಬರಿ ಕಣ್ಣಿನ ಮೂಲಕ ರಾಮನ ಮಹೋನ್ನತ ಚಿತ್ರವನ್ನು ಕೊಟ್ಟಿರುವುದಲ್ಲದೆ, ದೈವ ಸಾಕ್ಷಾತ್ಕಾರಕ್ಕೆ ತುಡಿವ ಮನಸ್ಸಿನ ಆಲೋಚನೆಗಳು ಅವಳ ಅನನ್ಯವಾದ ಮಾತೃಪ್ರೀತಿ,

ಮರಣವನ್ನೇ ತನ್ನ ಪಾಲಿಗೆ ಮುಕ್ತಿಯೆಂದು ಭಾವಿಸಿದ ಅವಳ ದೃಢನಿಲುವು, ಇವೆಲ್ಲವೂ ಏನನ್ನೂ ವಾಚ್ಯವಾಗಿ ಹೇಳದಿದ್ದರೂ ಅವರ ವ್ಯಕ್ತಿತ್ವಗಳೇ ಒಂದು ಮಹೋನ್ನತ ತತ್ವ ದರ್ಶನಗಳಾಗಿವೆ, ಶಬರಿ ರಾಮದರ್ಶನದ ಗುರಿ ಹಿಡಿದು ಬದುಕಿದವಳು, ರಾಮ ಲಕ್ಷ್ಮಣರನ್ನು ನಿಷ್ಕಲ್ಮಶ ವಾತ್ಸಲ್ಯದಿಂದ ಕಾಣುವ ಅವಳು ರಾಮನಿಗೆ ಸಾಮಾನ್ಯ ಮಾನವರಾದ ತಮಗಿಂತಲೂ ಉತ್ತಮಳೆನಿಸುತ್ತದೆ.

"ಬೆಳಕಿಗೊಲಿದವರ್ ಉರಿದ ಬತ್ತಿಯ
ಕರುಕ ಕಾಣರು ಲಕ್ಷ್ಮಣ
ಬಾಳಸುತ್ತಿಹ ದೇವ ತೇಜವ
ಕಾಂಬರಿಗೆ ಇದೆ ಲಕ್ಷಣ"

ಎನ್ನುವ ರಾಮನ ಮಾತು 'ಪು.ತಿ.ನ.'ರ ದೃಷ್ಟಿಯನ್ನು ಬಿಂಬಿಸುತ್ತದೆ. ಮನುಷ್ಯನಲ್ಲಿ ಲೋಪದೋಷ, ಸಣ್ಣತನಗಳು ಇರುವುದಾದರೂ, ಅವುಗಳತ್ತ ಲಕ್ಷ್ಯಕೊಡದೆ ಒಳ್ಳೆಯದನ್ನು ಮಾತ್ರವೇ ಕಾಣಬಲ್ಲಂತಹ ದೊಡ್ಡತನ ಶಬರಿ ಯಂತಹವರಿಗೆ ಮಾತ್ರ ಸಾಧ್ಯ. ಅದೇ ರೀತಿ ಪ್ರತಿ ಮನುಷ್ಯ 'ಕರಕನ್ನು' ನಿರ್ಲಕ್ಷಿಸಿ ಬೆಳಕನ್ನು ಮಾತ್ರವೇ ಕಾಣುವಂತಾದರೆ ! - ಎಂಬುದು ಪು.ತಿ.ನ.ರ ಒಳಮನಸ್ಸಿನ ಬಯಕೆ.

'ರಾಮೋದಯ' 'ಸೀತಾಪರಿಣಯ'-ಶೀರ್ಷಿಕೆಗಳೇ ಧ್ವನಿಸುವಂತೆ, ರಾಮನ ಹುಟ್ಟಿನ ಅಥವಾ ಅವತರಣದ ಸನ್ನಿವೇಶವನ್ನು, ರಾಮನು ಸೀತೆಯನ್ನು ಮದುವೆಯಾದ ಸನ್ನಿವೇಶವನ್ನೂ ಗೀತಗಳ, ಗೀತ ಸಂಭಾಷಣೆಗಳ ಮೂಲಕ ಚಿತ್ರಿಸಿದ್ದಾರೆ. ಇವುಗಳಲ್ಲಿಯಾವುದೇ ಗಂಭೀರ ತಾತ್ವಿಕ ಚಿಂತನೆಯಿಲ್ಲದೆ, ಉತ್ಸಾಹ, ಗೆಲುವು ಸಂಭ್ರಮಗಳ ವಾತಾ ವರಣವನ್ನು ಕಟ್ಟಿ ಕೊಡುತ್ತವೆ. ರಾಮನಂತಹ ವ್ಯಕ್ತಿಯ ಉದಯವೇ ದುಷ್ಟ ಶಿಕ್ಷಣಕ್ಕಾಗಿ! ಲೋಕದ ಜನ ಸಿರಿ ಸಂಪತ್ತುಗಳಿಂದ ವಂಚಿತರಾಗಿದ್ದಾರೆ. ಹೀನ ಜನರ, ದುಷ್ಟರ ದೌರ್ಜನ್ಯಗಳಿಗೆ ಎಲ್ಲೆಯಿಲ್ಲದಂತಾಗಿದೆ, ದಾನವರ ಬಾಧೆಯಿಂದ ಭೂಮಿಯೇ ಕುಸಿಯುತ್ತಿದೆ.

ಲೋಕವೇ ದಾರಿದ್ರ್ಯ, ನಿರಾಸೆ, ದುಷ್ಟಹಿಂಸೆ, ಕಷ್ಟ

ಕಾರ್ಪಣ್ಯಗಳಿಂದ ಮುಲುಗುತ್ತಿರುವಾಗ, ಪರಿಸ್ಥಿತಿಯ ಗಂಭೀರತೆ ಶ್ರೀಮನ್ನಾರಾಯಣನನ್ನು ಲೋಕಾವತರಣಕ್ಕೆ ಒತ್ತಾಯಿಸುತ್ತದೆ ತನ್ನ ಎಷ್ಟೋ ಅವತಾರಗಳ ಮೂಲಕ ಭೂಮಿಯ ಮೇಲಿನ ಸಂಕಟಗಳನ್ನು ನಿವಾರಿಸಿದಾತ, ಈಗಲೂ ದೇವತೆಗಳ ಮತ್ತು ಮಡದಿ ಲಕ್ಷ್ಮಿಯ ನಿವೇದನೆಗೆ ಓ ಗೊಟ್ಟು ಭೂಲೋಕದಲ್ಲಿ ಹುಟ್ಟುವುದೇ ಇಡೀ ನಾಟಕದ ವಸ್ತು. ಪು.ತಿ.ನ.ರ ಗೀತನಾಟಕಗಳನ್ನು ಸಮಗ್ರವಾಗಿ ಗ್ರಹಿಸುವುದರ ಮೂಲಕ ವಾಗಿಯೇ ಅವರ 'ತಾತ್ವಿಕತೆ'ಯ ಜಾಡು ಹಿಡಿಯಲು ಸಾಧ್ಯವಾಗುವುದೇ ಹೊರತಾಗಿ, ಬಿಡಿ ಬಿಡಿ ಕವನಗಳ ವಿಶ್ಲೇಷಣೆಯಿಂದ ಸಾಧ್ಯವಾಗುವಂತೆ ಇಲ್ಲಿ ಸಾಧ್ಯವಾಗುವುದಿಲ್ಲ. ರಾಮೋದಯದ ಕ್ಷಣಗಳು ಲೋಕಕ್ಕೆ ಅಮೃತ ಕ್ಷಣಗಳು ಅಶುಭದ ಅಂತ್ಯ ಶುಭದ ಆರಂಭದ ಸಂಕೇತ.

ಮುಂದಿನ ಗೀತನಾಟಕವಾದ 'ಶ್ರೀರಾಮ ಪಟ್ಟಾಭಿಷೇಕ'ಹಿಂದಿನ, ರಾಮಾಯಣದ ಕಥಾ ಪ್ರಸಂಗಗಳಿಗಿಂತ, ಸ್ವಲ್ಪ ಗಂಭೀರವಾದ ಆಲೋಚನೆಯ ಹಂದರದ ಮೇಲೆ ನಿಲ್ಲುತ್ತದೆ. ಶ್ರೀರಾಮ ಯುದ್ಧಾನಂತರ ಅಯೊಧ್ಯೆಗೆ ಹಿಂದಿರುಗಿ ಅಯೋಧ್ಯೆಯ ರಾಜ್ಯಭಾರದ ಹೊಣೆಯನ್ನು ವಹಿಸಿಕೊಂಡ ಸಂದರ್ಭವೇ ಇಲ್ಲಿನ ಕಥಾನಕ. ವಾಲ್ಮೀಕಿಗೆ ಆದರ್ಶ ಮಾನವನಾಗಿದ್ದ ರಾಮ ಪು.ತಿ.ನ. ಅವರಿಗೆ ದಿವ್ಯಮಾನವ, ಅವನೇ ಒಂದು 'ಮೌಲ್ಯ'ದ 'ತತ್ವ'ದ, ಆದರ್ಶದ ಸಂಕೇತ. ಹಾಗಾಗಿ ಅವನ ಪಾತ್ರದಲ್ಲಿನ ಮಹೋನ್ನತಿಯನ್ನು ಎತ್ತಿ ಕಾಣಿಸುವುದೇ ಪು.ತಿ.ನ.ರ ಉದ್ದೇಶ. ಅವತಾರ ಪುರುಷನಾದವನು ರಾಮ. ನಮ್ಮ ಮಾನವ ಮನದ ಅಳಿಯಾಸೆಗಳನ್ನು ಚಿವುಟಿಹಾಕಿ ಮಹದಾಸೆಗಳು ಹುಟ್ಟುಕೊಳ್ಳಲು ದಾರಿ ಮಾಡಿಕೊಳ್ಳಲು ಧರ್ಮ ಸಂಯಮಿತವಾದ ಅರ್ಥ, ಕಾಮ ಪ್ರಪಂಚದ ಅಗತ್ಯವಿದೆ. 'ರಾಮ' ಇಂತಹ ವ್ಯಕ್ತಿತ್ವವನ್ನು ಪ್ರತೀಕಿಸುವ ವ್ಯಕ್ತಿ ಯಾಗಿರುವುದರಿಂದ, ಇವನ ವ್ಯಕ್ತಿತ್ವದ ಚಿತ್ರಣವೇ ಇಡೀ ನಾಟಕದ ಹಿನ್ನೆಲೆಯ ಆಶಯ.

ರಾಮ ತ್ಯಾಗ, ಸಂಯಮ, ಶೀಲ ಸಂಪನ್ನ, ತಪಸ್ವಿ , ಆದರೆ ರಾಮನ ಈ ತ್ಯಾಗ ತಪಸ್ಸುಗಳು ಸಂಸಾರದಲ್ಲಿ ಬೇಸರ ಹುಟ್ಟಿ ಮೂಡಿದುವಲ್ಲ, ಅವನ ಮಾನವೀಯತೆಯನ್ನು ಘಾತಿಸದೆಯೂ ಅವನಲ್ಲಿ

ಮನೆಮಾಡಿಕೊಂಡಿದ್ದವು, ಅವನಿಗೆ ಜೀವನಧರ್ಮದ ಪರಿಚಯವಿದೆ. ಚತುರ್ವಿಧ ಪುರುಷಾರ್ಥಗಳಲ್ಲಿ ನಾಲ್ಕನೆಯದಾದ 'ಮೋಕ್ಷದ' ಮತ್ತು ಅದಕ್ಕೆ ಬೇಕಾದ ಭಕ್ತಿ ದೈವಾಗಮಗಳನ್ನು ಪ್ರತಿಪಾದಿಸುವುದು ವಾಲ್ಮೀಕಿ ಮಹರ್ಷಿಗಳ ಧ್ಯೇಯವಾಗಿರಲಿಲ್ಲ ಏಕೆಂದರೆ ವಾಲ್ಮೀಕಿ ಮಹರ್ಷಿಗಳು ಹುಡುಕ ಹೊರಟಿದ್ದು ಒಬ್ಬ ಮಹಾ ಪುರುಷನನ್ನು, ತನ್ನ ಆಲೋಚನೆಯ ಎತ್ತರಕ್ಕೆ ನಿಲ್ಲಬಲ್ಲ ಧೀರಧೀಮಂತ ಸಾಹಸಿ ಸತ್ ಪುರುಷನನ್ನು-ಎನ್ನುವುದು ಪು.ತಿ.ನ. ರವರ ನಂಬಿಕೆ. ಆದ್ದರಿಂದಲೇ ರಾಮನ ಪ್ರತಿಯೊಂದು ಗುಣದ ಬಗ್ಗೆ, ನಡತೆಯ ಬಗ್ಗೆ ಗಂಭೀರವಾದ ತಾರ್ಕಿಕ, ತಾತ್ವಿಕ ಚಿಂತನೆಗೆ ತೊಡಗಿದರು, ರಾಮನ ವ್ಯಾಪಕ ವ್ಯಕ್ತಿತ್ವಕ್ಕೆ ಹಲವಾರು ಮುಖಗಳುಂಟು, ಇದೇ ನಿರ್ದಿಷ್ಟ ಗುಣವೆಂದು ಗುರುತಿಸಲಾಗದ ರೀತಿಯಲ್ಲಿ ಒಂದೊಂದು ಸಂದರ್ಭದಲ್ಲಿಯೂ ಬದಲಾದಂತೆ ತೋರುವ ಅವನ ವರ್ತನೆ, ದ್ವಂದ್ವ ಸ್ಥಿತಿಗಳು ಅರ್ಥದ ಎಟುಕಿಗೆ ಮೀರಿ ನಿಲ್ಲುತ್ತದೆ. ಹಾಗೆಂದು ಅತಿ ಮಾನವನಾಗಿ ಮಾನವೀಯ ಸ್ಪಂದನಗಳಿಗೆ ಹೊರತಾದ ರೀತಿಯಲ್ಲಿ 'ಧರ್ಮ' ತಪಸ್ಸುಗಳಿಗೆ ಬದ್ಧನಾಗಿರಲಿಲ್ಲ, "ತ್ಯಾಗ ವಿದ್ದಂತೆ ಲೋಭವೂ ಅಕಾಮವಿದ್ದೆಡೆ ಕಾಮವೂ ಭ್ರಾತೃವತ್ಸಲತೆ ಇರುವೆಡೆ ಭ್ರಾತೃಘಾತಕತನವೂ ಇತ್ತು. ನೋವು ನಲಿವು, ಆಸೆ, ನಿರಾಸೆ, ಅಭಿಮಾನ, ನಿರಭಿಮಾನ, ಪ್ರೀತಿ, ಸಿಟ್ಟು ಇತ್ಯಾದಿಯಾಗಿ ಎಲ್ಲ ಭಾವಗಳಿಗೂ ಎಡೆಯಿತ್ತು. ಇಷ್ಟೆಲ್ಲ ಇದ್ದರೂ ಕೂಡಾ ಅವುಗಳು ಧರ್ಮ ಸಂಯಮಿತವಾಗಿದ್ದವು. ರಾಮನ ಧರ್ಮನಿಷ್ಠೆ ಆತನ ಹೃದಯರಸವನ್ನು ಶೋಷಿಸಲಿಲ್ಲ". ಇಂತಹ ರಾಮನ ವ್ಯಕ್ತಿತ್ವಕ್ಕೆ ಮಾರು ಹೋದದ್ದಷ್ಟೇ ಅಲ್ಲ. ತಮ್ಮ ತಾತ್ವಿಕ ಚಿಂತನೆಗಳ ಪ್ರತೀಕದಂತೆ ತೋರಿದ; ರೂಪಕವಾದ.

ಎಲ್ಲ ಮನುಷ್ಯರಂತೆ ರಾಮನಿಗೂ ಹೇರಾಸೆಯಿದೆ ಹಾಗೆಂದು ಅದನ್ನು ಪೂರೈಸಿಕೊಳ್ಳಲು ಸ್ವಾರ್ಥ, ವಂಚನೆಗಳ ಹಾದಿ ತುಳಿಯಲಿಲ್ಲ. ಸ್ವಜನ ಪ್ರೀತಿ, ಬಂಧು ಪ್ರೇಮವನ್ನು ಬಲಿಗೊಡಲಿಲ್ಲ, ಉದ್ಧಟನಂತೆ ವರ್ತಿಸಲಿಲ್ಲ, ಬದಲಾಗಿ ಪಿತೃವಾಕ್ಯ ಪರಿಪಾಲನೆಗೆ ಆತನ ವಚನಬದ್ಧತೆಗೆ ಸಲೀಸಾಗಿ ನಿರ್ಮೋಹಿಯಾಗಿ, ಬಂದಿಸಿತೂ ಅಸಮಾಧಾನವಿಲ್ಲದೆ, ಕಿಸಿಪಿಲ್ಲದೆ ಪ್ರತಿಭಟನೆಯಿಲ್ಲದೆ ವನವಾಸಕ್ಕೆ ಹೊರಟುನಿಂತ. ಬಂದಂತಹ ಕಷ್ಟ ಪರಂಪರೆಗಳನ್ನು ಧೈರ್ಯ ಸಾಹಸಗಳಿಂದ ಎದುರಿಸಿದ. ಅಲ್ಲದಿಗೂ

ತೇಜಸ್ಸನ್ನು ನೀಡಿ ಹಿರಿಯರನ್ನಾಗಿಸಿದ; ಸರ್ವರಿಗೂ ಸುಖ ಶಾಂತಿಗಳು ಲಭಿಸ ಬೇಕೆಂದು ಬಯಸಿದ - ಇಷ್ಟೆಲ್ಲ ಗುಣಗಳನ್ನು ಮೇಳವಿಸಿಕೊಂಡ ರಾಮನ ವ್ಯಕ್ತಿತ್ವ ಸಹಜವಾಗಿ ಪು.ತಿ.ನ. ರಂತಹವರನ್ನು ಪ್ರಭಾವಿಸಿದ್ದು ಆಶ್ಚರ್ಯವಲ್ಲ, ಆದರೆ ಪು.ತಿ.ನ. ಅವರು ಶ್ರೀರಾಮ ಪಟ್ಟಾಭಿಷೇಕ ನಾಟಕದಲ್ಲಿ ಶ್ರೀರಾಮನ ವ್ಯಕ್ತಿತ್ವದಲ್ಲಿನ ದ್ವಂದ್ವ'ದ ವಿಶ್ಲೇಷಣೆಗೆ ಹೊರಟಿದ್ದಾರೆ.

ರಾಮನ ಈ 'ದ್ವಂದ್ವ'ದ ನಿಲುವಿಗೆ ಕಾರಣವೇನಿರಬಹುದು ಎನ್ನುವುದರ ಬಗ್ಗೆ ಗಾಢ ಚಿಂತನೆಗೆ ತೊಡಗುತ್ತಾರೆ. ಆದರೆ ರಾಮ ನಂತಹವನಲ್ಲಿರುವ ಈ ಬಗೆಯ 'ದ್ವಂದ್ವ' ಸ್ವಭಾವಕ್ಕೆ ಸುಲಭವಾಗಿ ಸಮರ್ಥನೆ ದೊರೆಯದೆ,

"ಪಿತೃವಾಕ್ಯ ಪಾಲನಕೆ ರಾಜ್ಯ ಲಕ್ಷ್ಮಿಯನೆ ತೊರೆದೆ
ಸತಿಯಾಸೆ ಸಲಿಸೆ ಮಾಯಾಮೃಗ ಕೆಳಸಿದೆ, ಸ್ವಾಮಿ
ದಾಶರಥಿ ಮಹನೀಯ, ನಿನ್ನ
ಲೋಭ ತ್ಯಾಗಗಳ ಯೋಗವರಿಯವಯ್ಯಾ"
(ಶ್ರೀರಾಮ ಪಟ್ಟಾಭಿಷೇಕ. ಪು - 2)

ಎಂದು ಕೈ ಚೆಲ್ಲಿ ಕೂರುತ್ತಾರೆ. ಇದೇ ರೀತಿಯಲ್ಲಿ ಅವನ ವ್ಯವಹಾರಗಳೂ ಕೂಡಾ, ಕವಿ ಮನಸ್ಸಿಗೆ ಒಗಟುಗಳಾಗಯೇ ನಿಲ್ಲುತ್ತವೆ.

ಭ್ರಾತೃವತ್ಸಲನೆಂದು ಬಿರುದು ಹೊತ್ತವನು, ಭ್ರಾತೃಘಾತಕರ ಪೊರೆದು ಕೆಳೆಗೊಂಡುದನ್ನು ನೋಡಿದಾಗ ರಾಮನಲ್ಲಿನ ಮಮತೆ ವಿಷಮತೆಗಳ ಅರ್ಥವಾದರೂ ಏನೆಂದು ಯೋಚಿಸುವಂತಾಗುತ್ತದೆ. ವಾಲಿಯಯನ್ನು ಕೊಲ್ಲುತ್ತಾನೆ; ಸುಗ್ರಿವನನ್ನು ಕಾಯುತ್ತಾನೆ. ಇಂಥದ್ದರಲ್ಲಿ 'ಭ್ರಾತೃವತ್ಸಲ'ನೆಂಬ ಬಿರುದು ರಾಮನಿಗಿರುವುದು ವ್ಯಂಗ್ಯವೆನಿಸುತ್ತದೆ ಯಾದರೂ, ಶರಣಾರ್ಥಿಗಳ ಮೊರೆಗೆ ಓಗೊಟ್ಟು ಪೊರೆಯುವುದು ಅವನ ಧರ್ಮವದ್ದರಿಂದ ಅವನ 'ಕೃತಿ' ಸಮರ್ಥನೀಯವಾಗುತ್ತದೆ. ಅಲ್ಲದೆ ವಾಲಿಯೂ ಅನ್ಯಾಯವೆಸಗಿದ್ದಾನೆ. ರಾವಣನೂ ಒಂದು ರೀತಿಯಲ್ಲಿ ಅನ್ಯಾಯವೆಸಗಿದ, ಅಪರಾಧಿಗಳನ್ನು ಶಿಕ್ಷಿಸುವುದೂ ಧರ್ಮವೇ ಆಗುತ್ತದೆ.

ರಾಮನ ಪ್ರತಿಯೊಂದು ಕಾರ್ಯವೂ ಧರ್ಮ ಸಂಯಮಿತವಾದುದು ಎಂದೆನಿಸುವುದರಿಂದ ಮೇಲುನೋಟಕ್ಕೆ ನಿಷ್ಠುರ, ಅನ್ಯಾಯವೆಂದು ಕಾಣಿಸಿದರೂ ರಾಮನ ವ್ಯಕ್ತಿತ್ವಕ್ಕೆ ಕಳಂಕಬಾರದೆ ಅವನ ವ್ಯಕ್ತಿತ್ವಕ್ಕೆ ಇನ್ನಷ್ಟು ಮೆರುಗು ಬರುತ್ತದೆ.

ಇದೇ ರೀತಿಯಲ್ಲಿ ಸೀತೆಯ ವಿಚಾರದಲ್ಲಿ ಅವನ ವರ್ತನೆ ತೀರಾ ಕ್ರೂರವೆನಿಸುತ್ತದೆ. ಹಿರಿಕಿರಿಯರೆನ್ನದೆ ಎಲ್ಲರಲ್ಲೂ ಸಮಾನ ಭಾವದಿಂದ, ಸ್ನೇಹದಿಂದ ನಡೆದುಕೊಳ್ಳುತ್ತಾ, ಕಿರಿಯರಲ್ಲಿ ತನ್ನ ವ್ಯಕ್ತಿತ್ವದಿಂದ ನಡವಳಿಕೆಯಿಂದ ಸ್ಫೂರ್ತಿ ತುಂಬಿ ತನ್ನೆತ್ತರಕ್ಕೆ ಬೆಳೆಯಲು ಪ್ರಚೋದಿಸುವ, ಆತ್ಮವಿಶ್ವಾಸ ಮೂಡಿಸುವ ಮಹತ್ಕಾರ್ಯಗಳನ್ನು ಮಾಡಿಸುವ ರಾಮ -,

"ಇಂಥ ಚೆಂದುಳ್ಳವಳು ಎಂತು ಕಾಮಿಯ ಮನೆಯೊಳಂದ ಗೆಡದಿದ್ದ"........ ಎಂದು ಸಂದೇಹಿಸಿ ಪ್ರಶ್ನಿಸುವುದು, ರಾಮನಂತಹವನಿಗೆ ತೀರಾ ಸಣ್ಣತನವಾಗುತ್ತದೆ. ಮಹಾನ್‌ವ್ಯಕ್ತಿಯೆಂದು ಪರಿಭಾವಿಸಿ ಹೊರಟ ಪು.ತಿ.ನ.ರಿಗೆ ಈ ಸಂದಿಗ್ಧ ಒಂದು ಸವಾಲಾಗುತ್ತದೆ. ಪ್ರಜಾ ಪ್ರಭುತ್ವ ಪರಿಸರದಲ್ಲಿ ಜನನಾಯಕನಾದವನಿಗೆ ಕೆಲವು ಜವಾಬ್ದಾರಿಗಳಿರುತ್ತವೆ. ಸ್ವಚ್ಛಂದತೆ, ನಿರಂಕುಶತೆಗಳು ಶ್ರೇಷ್ಠನಾಯಕನ ಲಕ್ಷಣವಲ್ಲ. ಜನಾಭಿಪ್ರಾಯಕ್ಕೆ ತಲೆಬಾಗಿ ವಿನಯದಿಂದ ನಡೆದುಕೊಳ್ಳ ಬೇಕೆಂಬ ಅರಿವು, ಹೆಂಡತಿಯ ಶೀಲ, ನಡತೆಗಳ ಬಗ್ಗೆ ಪ್ರಜೆಗಳಲ್ಲಿ ಸಂದೇಹಕ್ಕೆ ಎಡೆಯಿರಬಾರದೆಂಬ ವಿಚಾರಕ್ಕೆ ಮಣಿದು ಅಗ್ನಿಪರೀಕ್ಷೆಗೆ ಒಳಗಾಗಿಸಿ ಸ್ವೀಕರಿಸುವಾಗ, ತನ್ನೆಲ್ಲ ಅನುಮಾನ ಕ್ರೌರ್ಯಗಳಿಗೆ ಕಾರಣ 'ಜನನಾಯಕನಾದವನ ಹೊಣೆಯ ಹೊರೆ' ಎಂದು ಸಮರ್ಥಿಸಿಕೊಳ್ಳುವಂತೆ ಚಿತ್ರಿಸಿದ್ದಾರೆ. ಪು.ತಿ.ನ. ಅವರಿಗೆ ಸೀತೆಯ ಪರವಾದ ಕಾಳಜಿಗಿಂತ, ಜನಾಭಿಪ್ರಾಯ ಜನಾಪ ವಾದದಭೀತಿ'ಯ ಕಡೆಗೆ ರಾಮನ ಲಕ್ಷ್ಯವೆಷ್ಟಿತ್ತೆಂದು ತೋರುವುದೇ ಮುಖ್ಯವಾಗಿತ್ತು. ಒಂದೇ ಒಂದು ಸಮಾಧಾನವೆಂಬಂತೆ, ಒಂದೆಡೆಯಲ್ಲಿ ಸೀತೆಯ ಬಗ್ಗೆ ತಾನೆಸಗಿದ ಕಾರ್ಯಕ್ಕೆ ಪಶ್ಚಾತ್ತಾಪ ದಗ್ಧನಾದಂತೆ. ಅವಳಿಗಾಗಿ ಮರುಗಿದಂತೆ, "ನಾ ಸಾಕೇತಕೆ ಪೋಪೆನೆಂತು ದಯಿತೇ ಇನ್ನೇಕೆ ರಾಜ್ಯೋತ್ಸವಂ" ಎಂದು ನುಡಿದು, ನೈಷ್ಠುರ್ಯದ ಮುಸುಕಿನಲ್ಲಿ

ಹುದುಗಿದ್ದ ಮೃದುತೆಯನ್ನು ಅನಾವರಣಗೊಳಿಸುವ ಪ್ರಯತ್ನ ನಡೆಸಿದ್ದಾರೆ.

'ಶ್ರೀರಾಮ ಪಟ್ಟಾಭಿಷೇಕ'ದ ಸಂದರ್ಭದಲ್ಲಿ, ಅಯೋಧ್ಯೆಯೊಂದು ಸುಖೀರಾಷ್ಟ್ರ, ಕಲ್ಯಾಣ ರಾಜ್ಯ ಸಿರಿ-ಸಂಪನ್ನರಾಷ್ಟ್ರವಾಗಲಿ ಎಂಬ ಹಾರೈಕೆಯ ಹಿನ್ನೆಲೆಯಲ್ಲಿ, ನಾಯಕರಾಮನ ಮೂಲಕವಾಗಿ ಕವಿಯೂ ತನ್ನ ರಾಷ್ಟ್ರಹಿತ ಚಿಂತನೆಗೆ ತೊಡಗುತ್ತಾರೆ. ರಾಮ ಒಬ್ಬ ಸಮರ್ಥ ಆದರ್ಶಪ್ರಾಯನಾದ ಜನನಾಯಕ. ಜನನಾಯಕನಾದವನೊಬ್ಬ ಹೇಗಿರಬೇಕೆಂಬುದನ್ನು 'ರಾಮ' ಪಾತ್ರದ ಮೂಲಕ ವಿವರಿಸುತ್ತಾರೆ. ಋಷಿಗಳು ಬಯಸುವಂತೆ ಧರ್ಮ, ರುಜುತ್ವ ಸುಭಿಕ್ಷತೆಗಳನ್ನು ಕಾಪಾಡುವ ಜವಾಬ್ದಾರಿ ಅವನ ಮೇಲಿದೆ. ರಾಮನು ಅವರೆಲ್ಲರ ಹಾರೈಕೆಗಳನ್ನೂ ಸಾರ್ಥಕಗೊಳಿಸುವ ಪ್ರತಿಜ್ಞೆ ಮಾಡುತ್ತಾನೆ. ಎಲ್ಲ ಬಲ್ಲವನಾದರೂ ಬಲ್ಲೆನೆಂಬ 'ಅಹಂ' ಇಲ್ಲದೆ ಬಲ್ಲವರ ನುಡಿಗೆ ಓ ಗೊಟ್ಟು ಮನದಳಿವ ಸೌಜನ್ಯವಿದೆ. ಆದ್ದರಿಂದಲೇ, ರಾಜ್ಯದಲ್ಲಿ ಸಿರಿ ಸಂಪತ್ತು, ಸಸ್ಯ ಸಮೃದ್ಧಿ, ಜ್ಞಾನಾಭಿವೃದ್ಧಿ, ಶಾಂತಿ, ಧರ್ಮ, ಸತ್ಯ, ಪರಾಕ್ರಮ, ಇತ್ಯದಿ ಮೌಲ್ಯಗಳ ವರ್ಧನೆ, ಸುಖ, ಕ್ಷೇಮ, ನಿರ್ಭೀತಿ, ವಿನಯ, ವಿಧೇಯತೆ-ಹೀಗೆ ಪ್ರತಿಯೊಂದು ವಿಚಾರದಲ್ಲಿಯೂ ಹೆಚ್ಚಿನ ಆಸಕ್ತಿವಹಿಸಿ ಅವುಗಳನ್ನು ನೆಲೆಗೊಳಿಸಲು ಸಾಧ್ಯವಾಗುವಂತೆ ಮಾಡಿ, ಸರ್ವತೋಮುಖವಾದ ಅಭಿವೃದ್ಧಿಯನ್ನು ಸಾಧಿಸುವೆನೆಂಬ ಅವನ ಪ್ರತಿಜ್ಞೆಯನ್ನು ಏಳೆಂಟು ಚರಣಗಳಲ್ಲಿ ವಿವರಿಸತ್ತಾರೆ. ಕವಿ ಪು.ತಿ.ನ. ಕಾಣುವ ಆದರ್ಶರಾಜ್ಯದ 'ಕಲ್ಯಾಣ ರಾಷ್ಟ್ರದ' ಕಲ್ಪನೆಯ ಭವ್ಯ ಚಿತ್ರ ಇಲ್ಲಿ ಮೂಡಿ ಬಂದಿದೆ. ಇಂತಹ ರಾಷ್ಟ್ರದ, ರಾಜ್ಯದ ನಿರೀಕ್ಷೆ ಸಾಕ್ಷಾತ್ಕಾರಗೊಳ್ಳ ಬೇಕಾದರೆ ರಾಮನಂತಹ ಶುಚಿ - ಋಚಿಯುಳ್ಳ ನಾಯಕನೇ ಆಗಬೇಕು, ರಾಮನ ಮೂಲಕ ಕವಿ ನಡೆಸವ ರಾಷ್ಟ್ರಹಿತ ಚಿಂತನೆಯ ಹಿಂದೆ, ಇಂದಿನ ನಮ್ಮ ನಾಯಕರ ನೀತಿಗೆಟ್ಟ ವ್ಯವಹಾರಗಳ ಕ್ರೂರ ಪರಿಣಾಮಗಳ ಬಗೆಗಿನ ಮಿಡಿತವಿದೆ; ನೋವಿದೆ ' ಎಂಬುದು ಸೂಕ್ಷ್ಮ ಮನಸ್ಸುಗಳಿಗೆ ಹೊಳೆಯದಿರದು, ರಾಮನು ನಿರ್ಧರಿಸಿದ ಈ ಆದರ್ಶ ರಾಜ್ಯದ ಕನಸು ಗಾಂಧೀಜಿಯ ಕನಸಾಗಿತ್ತು. ಇದು ಪು.ತಿ.ನ. ಅವರ ಕನಸೂ ಆಗಿರಲಿಕ್ಕೆ ಸಾಧ್ಯ. ನಾಟಕದ ಕಡೆಯಲ್ಲಿ ಬರುವ :-

"ಕಾಲ ಕಾಲಕೂ ಮೇಘ ವರ್ಷಿಸಲಿ
ಪೃಥಿವಿಯಾಗಲಿ ಸಸ್ಯಶಾಲಿನಿ
ಕ್ಷೋಭೆಗಳಿಲ್ಲದೆ ದೇಶ ಹದುಳಿರಲಿ
ಸಾಧುಗಭಯ, ಜಗಕೆಲ್ಲಕು ಸಮ್ಮುದ"
(ಶ್ರೀರಾಮ ಪಟ್ಟಾಭಿಷೇಕ ಪು-24)

-ಎಂಬ ವೃಂದದವರ ಪ್ರಾರ್ಥನೆ

"ಜರುಗಲಿ ನವ ಭಾರತದೊಳ್
ನರಕುಲಮಣಿ ರಾಮನುತ್ಸವಂ ಮನೆಮನೆಯೊಳ್
ಪರಿದೋಡಲಿ ಕಾರ್ಪಣ್ಯಂ
ನೆರೆಯಲಿ ಹರ್ಷಂ ಸುತುಷ್ಟಿ ನಿರ್ಭಯ ಸೌಖ್ಯಂ"

-ಎನ್ನುವ ಕವಿಯ ಭರತವಾಕ್ಯ

- ಎಲ್ಲವೂ 'ಭಾರತ' ರಾಷ್ಟ್ರದ ಹಿತ ಚಿಂತನೆಯ ಕಡೆಗೇ ನಿರ್ದೇಶಿತವಾಗಿದೆ.

ಶತ್ರು ಪಾದಾಕ್ರಾಂತವಾಗಿದ್ದ ಭಾರತ ವಿಕ್ರಾಂತ ನವ ಭಾರತವಾದ ಸಂದರ್ಭದಲ್ಲಿ ರಾಮ ರಾಜ್ಯದಂತಹ ಆದರ್ಶರಾಜ್ಯದ ಹಾರೈಕೆ ಅರ್ಥಪೂರ್ಣವಾಗಿದೆ. ನಾಡು, ನುಡಿ, ಸಂಸ್ಕೃತಿ, ಪರಂಪರೆಯ ಬಗ್ಗೆ ಹಿರಿದು ಗೌರವ ಅಭಿಮಾನಗಳನ್ನು ಎದೆತುಂಬಿಕೊಂಡಿರುವ ಪು.ತಿ.ನ.ಅವರಿಗೆ, ಅವು ಕಳೆದು ಹೋಗಬಾರದೆನ್ನುವ ಕಾಳಜಿ ಇದೆ. ಆದರೆ ಆಧುನಿಕೀಕರಣ, ಪಾಶ್ಚಾತ್ಯೀಕರಣ, ಜಾಗತೀಕರಣ, ಉದಾರೀಕರಣ, ವಿಜ್ಞಾನ ತಂತ್ರಜ್ಞಾನಗಳ ತಡೆಯಿಲ್ಲದ ಆಕ್ರಮಣಗಳಿಗೆ ಒಳಗಾಗಿ ನಾವು ಅಮೂಲ್ಯವಾದ ನಮ್ಮ ಸಾಂಸ್ಕೃತಿಕ ಆಧ್ಯಾತ್ಮಿಕ ಪರಂಪರೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ, ಗೊತ್ತು ಗುರಿಯಿಲ್ಲದ ಅನಿರ್ದಿಷ್ಟ ಹಾದಿಗಳಲ್ಲಿ ನಮ್ಮನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ಶ್ರೇಷ್ಠ ಮೌಲ್ಯ ಕೋಶಗಳಾದ ರಾಮಾಯಣ, ಮಹಾಭಾರತ ಮತ್ತು ಪುರಾಣಗಳ ಬಗ್ಗೆ ವಿಸ್ಮೃತರಾಗಿ ಬಿಟ್ಟಿದ್ದೇವೆ. ಮತ್ತೆ ನಾವು ಕಳೆದು ಕೊಂಡ ನಮ್ಮ ಅಮೂಲ್ಯ ಪರಂಪರೆಯನ್ನು ಉಳಿಸಿಕೊಳ್ಳ ಬೇಕಾದರೆ, ಉತ್ತಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾದರೆ, ನೀತಿವಂತರಾಗಿ ಬಾಳಬೇಕಾದರೆ, ರಾಮನಂತಹ

ವ್ಯಕ್ತಿಯ-ವ್ಯಕ್ತಿತ್ವ ಚರಿತ್ರೆಗಳ ಪುನರ್ಮನನದ ಪ್ರಕ್ರಿಯೆ ಅಗತ್ಯವಿದೆ. ಆದ್ದರಿಂದಲೆ ಕವಿ 'ನರಕುಲಮಣಿ ರಾಮನುತ್ಸವಂ ಮನೆ ಮನೆಯೊಳ್ ಜರುಗಲಿ' ಎಂದು ಹಾರೈಸುತ್ತಾರೆ. ಉತ್ಸವದ ನೆಪದಲ್ಲಿ ಅವನ ದಿವ್ಯ ಚರಿತ್ರೆಯ ಪಾರಾಯಣವಾಗಿ, ಅವನ ಮಾರ್ಗ ದರ್ಶನ ನಮಗಾಗಲೀ ಎಂಬುದೇ ಕವಿಯ ಉದ್ದೇಶ. ಇದೆಲ್ಲವನ್ನು ಹೇಳುವ ಪು.ತಿ.ನ. ಹೊಸ ಪೀಳಿಗೆಯವರಿಗೆ, ಬುದ್ಧಿಜೀವಿಗಳಿಗೆ ಗೊಡ್ಡು ಸಂಪ್ರದಾಯವಾದಿ ಅನಿಸಬಹುದು. ಅವರಿಗೂ ಈ ಅಳುಕಿದೆ. ಅದಕ್ಕೇ ಅವರು "ದಿವ್ಯ ಸಾಂಪ್ರದಾಯಿಕ ಪಾರಾಯಣ ಕಾಲಕ್ಷೇಪಾದಿಗಳಲ್ಲೂ, ಶ್ರೀರಾಮ ಪಟ್ಟಾಭಿಷೇಕದಂತಹ ಕಲ್ಪಗಳಲ್ಲೂ (ಅನ್ಯಮತೀಯರಂತೆ ತೋರುವ ಬುದ್ಧಿವಾದಿಗಳಿಗೆ) ಅಸಡ್ಡೆ ಮೂಡಿರುವುದು ನಮ್ಮ ದುರಾದೃಷ್ಟ" ಎಂದು ಮನನೊಂದು ನುಡಿದಿದ್ದಾರೆ.

ಶ್ರೀರಾಮ ಪಟ್ಟಾಭಿಷೇಕದ ಸಂದರ್ಭ, ಪು.ತಿ.ನ. ಅವರ 'ರಾಷ್ಟ್ರಚಿಂತನೆ' 'ಜನನಾಯಕತ್ವ' ಇತ್ಯಾದಿಗಳ ಬಗ್ಗೆ ಅವರು ರೂಪಿಸಿಕೊಂಡ ವಿಚಾರಗಳು ತಾತ್ವಿಕ ಚಿಂತನೆಗಳಿಗೆ ಒಂದು ನೆಪ. ವ್ಯಕ್ತಿ, ಸಂದರ್ಭ, ಸನ್ನಿವೇಶಗಳು ಅವರ ಎಲ್ಲ ಬಗೆಯ ಚಿಂತನಗಳಿಗೆ ಒಂದು ವಿಸ್ತಾರವಾದ ವೇದಿಕೆಯಾಗಿ ಪರಿಣಮಿಸುತ್ತವೆ. ರಾಮಾಯಣ, ಮಹಾಭಾರತ ದಂತಹವುಗಳಲ್ಲಿನ ಸನ್ನಿವೇಶಗಳಲ್ಲಿ ತೀರಾ ತೀರಾ ಸಮಕಾಲೀನವಾದ ಆಲೋಚನೆಗಳಿಗೆ ಅವಕಾಶವಿದೆ. ಎಲ್ಲಕಾಲಕ್ಕೂ ಪ್ರಸ್ತುತವೆನಿಸಬಹುದಾದ ಸುಪ್ತ ತಾತ್ವಿಕ ಚಿಂತನೆಗಳ ಬೃಹತ್ ಕೋಶವಿದೆ. ಅಖಂಡವಾದ ಅಂತಃ ಸತ್ವವಿದೆ. ಇಂದಿಗೂ, ಪು.ತಿ.ನ. ಅಷ್ಟೇ ಅಲ್ಲ, ಆಧುನಿಕ ಲೇಖಕರೂ ಕೂಡಾ ಈ ಕಾವ್ಯಗಳ ಸಂದರ್ಭಗಳನ್ನು ಸಮಕಾಲೀನ ಗೊಳಿಸುತ್ತ, ಪುರಾಣ ಭಂಜಕತೆಗೆ ಒಳಪಡಿಸುತ್ತಾ, ಆಧುನಿಕ ವಿಚಾರಗಳ ಅಭಿವ್ಯಕ್ತಿಗೆ ರೂಪಕಗಳಾಗಿ, ಪ್ರತಿಮೆ, ಪ್ರತೀಕಗಳಾಗಿ ರೂಪಾಂತರಿಸಿ ಕೊಳ್ಳುತ್ತಾ ಪ್ರಸ್ತುತತೆಯ ನೆಲೆಗೆ ಒಯ್ದಿದ್ದಾರೆ. ಪು.ತಿ.ನ. ಇದಕ್ಕೆ ಹೊರತಲ್ಲವಾದರೂ, ಅಭಿವ್ಯಕ್ತಿಯ ರೀತಿ, ಬಳಸುವ ಭಾಷೆ, ಸಾಂಪ್ರದಾಯಿಕವಾಗಿದ್ದು ಅವರ ಆಧುನಿಕ ಮನಸ್ಸು ನಮ್ಮ ಗಮನದಿಂದ ತಪ್ಪಿಹೋಗುತ್ತದೆ. ಆದರೆ ಅದಕ್ಕೆ ಕಾರಣ ಅವರು ಬೆಳೆದು ಬಂದ ವಾತಾವರಣ. "ಸಾಂಪ್ರದಾಯಿಕವಾದ ಸಂಸ್ಕೃತದ ವಿಧಾನದಲ್ಲಿನ ಮೂರು ಪರಿಕಲ್ಪನೆಗಳನ್ನು ತಮ್ಮ ಆಲೋಚನೆಯ

ವಿಧಾನದಲ್ಲಿ, 'ಅಳವಡಿಸಿ ಕೊಂಡಿದ್ದೇನೆ, ಅವು ಸ್ಪಷ್ಟತೆ, ಸಂಕ್ಷಿಪ್ತತೆ, ಅಭಿವ್ಯಕ್ತಿ (ಸುಂದರ)' ಎಂದು ಗುರುತಿಸುತ್ತಾರೆ. ಸಂಸ್ಕೃತ ಪರಂಪರೆಯೇ ತಮ್ಮ ಕಾವ್ಯಕ್ಕೆ ಪುಷ್ಟಿ ನೀಡಿದೆ ಎನ್ನುವುದನ್ನು ಪದೇ ಪದೇ ಸ್ಮರಿಸಿಕೊಳ್ಳುತ್ತಾರೆ. ಅಭಿವ್ಯಕ್ತಿಯಲ್ಲೂ ಸೌಂದರ್ಯವಿರಬೇಕೆಂದು ಬಯಸುವುದರಿಂದಲೇ, ಆದಷ್ಟೂ ರಮ್ಯ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಹೀಗಾಗಿ ಅಸಂಗತತೆ, ಅಸ್ಪಷ್ಟತೆಗಳಿಗೆ ಅವಕಾಶವಾಗಲಾರದ 'ಗೀತನಾಟಕಗಳ'ನ್ನು ಒಲಿದದ್ದು ಸ್ವಾಭಾವಿಕವೇ! ವಸ್ತು ರಮ್ಯತೆ, ಅಭಿವ್ಯಕ್ತಿ ರಮಣೀಯತೆಗಳಿಂದ, ರಂಜನೀಯವಾಗಿಸಬೇಕೆಂಬುದು ಅವರ ಪರಮ ಉದ್ದೇಶ. ಇಂತಹ ಎಲ್ಲ ನಿರೀಕ್ಷೆಗಳಿಗೆ ಸಮರ್ಥವಾಗಿ ಒದಗಿ ಬಂದದ್ದು ರಾಮಾಯಣ ಮತ್ತು ಭಾಗವತಗಳು.

ಒಟ್ಟಾರೆಯಾಗಿ ಒಂದು ಚೌಕಟ್ಟಿನಲ್ಲಿ ಯಾವುದೋ ಒಂದು ತಾತ್ವಿಕತೆಯ ಅಂಶವನ್ನು ಎತ್ತಿ ಹಿಡಿಯುವುದಕ್ಕಿಂತ ಗೀತನಾಟಕದಂತಹ ಒಂದು ವಿಶಾಲ ಭೂಮಿಕೆಯ ಹಿನ್ನೆಲೆಯಲ್ಲಿ ಕಥಾನಕ, ಸನ್ನಿವೇಶ, ಪಾತ್ರಗಳೆಲ್ಲದರ ಮೂಲಕವಾಗಿ ಹಲವು ಬಗೆಯ ಚಿಂತನೆಗಳಿಗೆ ಅವಕಾಶ ಕಲ್ಪಿಸಿಕೊಳ್ಳಲು ಹೊರಟರು. ರಾಮನ ಬದುಕಿನಲ್ಲಿ ಬರುವ ಹಲವು ಸನ್ನಿವೇಶಗಳು ಒಂದಕ್ಕಿಂತ ಒಂದು ಭಿನ್ನವಾಗಿದ್ದು, ಅವನ ನಡವಳಿಕೆಯೇ ಅನೇಕ ಆಲೋಚನೆಗಳಿಗೆ, ಚಿಂತನೆಗಳಿಗೆ ಎಡೆಮಾಡುತ್ತವೆ.

ಮೇಲಿನ ಎಲ್ಲಾ 'ರಾಮಾಯಣ' ಸಂಬಂಧಿತ ನಾಟಕಗಳು ಕಿರುನಾಟಕಗಳು. ಕೇವಲ ಒಂದೊಂದು ಸಂದರ್ಭಕ್ಕಷ್ಟೇ ಸೀಮಿತಗೊಂಡವು. 'ಶ್ರೀರಾಮಪಟ್ಟಾಭಿಷೇಕ' ತನ್ನ ಸೀಮಿತ ವ್ಯಾಪ್ತಿಯಲ್ಲಿಯೇ, ರಾಷ್ಟ್ರ ಚಿಂತನೆ, ನಾಯಕತ್ವಗಳ ಬಗ್ಗೆ ಆಲೋಚಿಸುವಂತೆ ಮಾಡಿದೆ. ಆದರೆ 'ಅಹಲ್ಯೆ' ನಾಟಕ ಪು.ತಿ.ನ. ಅವರ ರಾಮಾಯಣ ಸನ್ನಿವೇಶಗಳಲ್ಲಿ ಒಂದಾದ 'ಅಹಲ್ಯೆ'ಯ ಶಾಪ, ರಾಮನಿಂದ ಉದ್ಧಾರದ ಕಥಾ ಭಾಗವನ್ನೇ ಕೇಂದ್ರವಾಗಿರಿಸಿ ಕೊಂಡಿದ್ದರೂ, ಇದರಲ್ಲಿನ ಕಾಮ-ಪ್ರೇಮ ಸಂಬಂಧವಾದ 'ತಾತ್ವಿಕ ಜಿಜ್ಞಾಸೆ' ಈ ಕೃತಿಯನ್ನು ಅನನ್ಯವಾಗಿಸಿದೆ.

### ಅಹಲ್ಯೆ: ಕಾಮ-ಪ್ರೇಮ ಚಿಂತನೆಯ ಅನನ್ಯತೆ

ವಾಲ್ಮೀಕಿ ರಾಮಾಯಣದಲ್ಲಿ ಎಲ್ಲಿಯೋ ಕ್ವಚಿತ್ತಾಗಿ ಮಿಂಚಿ

ಮರೆಯಾಗುವ ಗೌತಮ ಅಹಲ್ಯೆಯರ ವೃತ್ತಾಂತ ಪು.ತಿ.ನ.ರ ಈ 'ಅಹಲ್ಯೆ' ಕೃತಿಯಲ್ಲಿ, ಎಲ್ಲ ಸೂಕ್ಷ್ಮತೆಗಳೊಂದಿಗೆ ವಿಸ್ತಾರವಾಗಿ ಮೈ ಪಡೆದಿದೆ, ಕೇವಲ 40 ಶ್ಲೋಕಗಳಲ್ಲಿ 48.49ನೇ ಸರ್ಗಗಳಲ್ಲಿ, 'ಬಾಲಕಾಂಡದಲ್ಲಿ' ಬರುವ ವೃತ್ತಾಂತ ಪು.ತಿ.ನ. ಕೃತಿಯಲ್ಲಿ ಬೃಹತ್ತಾಗಿ ಹರಡಿಕೊಂಡಿದೆ. 'ಅಹಲ್ಯೆ'ಯ ಜಾರತನಕ್ಕೆ ಶಿಕ್ಷೆಯಾಗಿ ಶಾಪ ಪಡೆದದ್ದು, ರಾಮನಿಂದ ಉದ್ಧಾರವಾದದ್ದು ಇದನ್ನು ಸ್ಥೂಲವಾಗಿ ಹೇಳಿ ಮುಗಿಸುವುದು ಪು.ತಿ.ನ.ರ ಉದ್ದೇಶವಲ್ಲ. 'ಅಹಲ್ಯೆ'ಯ ನೈತಿಕ ಪತನಕ್ಕೆ, ಅವಳ ಜಾರತನಕ್ಕೆ ಕಾರಣವೇನಿರಬಹುದೆಂಬ ಜಿಜ್ಞಾಸೆಯಲ್ಲಿ ಕಾಮ - ಪ್ರೇಮಗಳ ದ್ವಂದ್ವ; ಮುಖಾಮುಖಿಯಾದಾಗ ಹುಟ್ಟಿಕೊಳ್ಳುವ ಪರಿಣಾಮ; ಇದರ ಹಿಂದಿನ ಮನೋವ್ಯಾಪಾರಗಳು; ಮನಃ ಸ್ಥಿತಿಗಳು; ಸ್ವಭಾವ ಧರ್ಮದಲ್ಲಿನ ಲೋಪ ದೋಷಗಳು; ಪತಿವ್ರತೆಯಾದ ಅಹಲ್ಯೆ ಜಾರತನಕ್ಕೆ ಜಾರುವುದಕ್ಕೆ ಅವಳ ಹಿಂದಿನ ಮಾನಸಿಕ ಒತ್ತಡಗಳು - ಇವೆಲ್ಲವನ್ನು ಸೂಕ್ಷ್ಮವಾಗಿ ಗಮನಿಸಬೇಕಾದ; ಆಲೋಚಿಸಬೇಕಾದ ಅಗತ್ಯದ ಅರಿವು ಪು.ತಿ.ನ.ರನ್ನು ಮನೋ ವಿಜ್ಞಾನದೆಡೆಗೆ ತಿರುಗಿಸಿತು. ಆದರೆ ಹಾಗೆಂದು ಫ್ರಾಯ್ಡ್, ಯೂಂಗ್‌ರ ಆಶ್ರಯ ಪಡೆಯಲಿಲ್ಲ. ತಮ್ಮ ಸಾಂಪ್ರದಾಯಿಕ ಚಿಂತನೆಯ ಚೌಕಟ್ಟಿನಲ್ಲಿಯೇ ಗೌತಮ ಅಹಲ್ಯೆಯರ ವ್ಯಕ್ತಿತ್ವ ಸ್ವಭಾವಗಳ ವಿಶ್ಲೇಷಣೆಗೆ ಹೊರಟರು.

ತಪೋನಿಷ್ಠನೂ ಅಗ್ನಿತೇಜವುಳ್ಳವನೂ ಮಹಾಮಹಿಮಾನ್ವಿತನೂ ಆದ ಗೌತಮಾನ ಸತಿ ಅಹಲ್ಯೆ ಪತಿವ್ರತೆ, ಆದರೆ ಇಂತಹ ಪತಿವ್ರತೆ ಕ್ಷಣಿಕ ದೈಹಿಕ ಸುಖಕ್ಕಾಗಿ ಸ್ವರ್ಗದರಸು ಇಂದ್ರನಿಗೆ ಸೋಲುತ್ತಾಳೆ. ತನ್ನದೆಲ್ಲವನ್ನೂ ಧಾರೆಯೆರೆಯುತ್ತಾಳೆ. ಮಡದಿಯ ದ್ರೋಹವನ್ನೂ ಇಂದ್ರನ ವಂಚನೆಯನ್ನೂ ಅರಿತ ಗೌತಮ ಕ್ರುದ್ಧನಾಗಿ ಇಬ್ಬರಿಗೂ ಶಾಪವೀಯುತ್ತಾನೆ, ಅಶರೀರಿಯಾಗಿ ಅಗೋಚರೆಯಾಗಿ, ನರಳುತ್ತ, ಬೂದಿಯಲ್ಲಿ ಹೊರಳುತ್ತಾ ಬಿದ್ದಿರುವಂತೆ ಶಾಪವೀಯುತ್ತಾನೆ. ಇಂದ್ರನಿಗೂ ಪುರುಷಾಂಗವನ್ನು ಕಳೆದುಕೊಳ್ಳುವಂತೆ ಶಪಿಸುತ್ತಾನೆ. ಅಹಲ್ಯೆಯ ಕಣ್ಣೀರು, ಪಶ್ಚಾತ್ತಾಪಗಳಿಂದ ಕರಗಿದ ಗೌತಮ, ರಾಮನ ಬರವಿನ ಮೂಲಕ ಪರಿಹಾರವೆಂದು ಸೂಚಿಸುತ್ತಾನೆ. ಇಂದ್ರ ಅಗ್ನಿಯ ನೆರವಿನಿಂದ ಪುರುಷತ್ವ ಪಡೆಯುತ್ತಾನೆ. ಇದಿಷ್ಟೂ ಮೂಲ ಕಥೆ. ಪು.ತಿ.ನ. ಕಥೆಯ ಹಂದರವಲ್ಲಿ

ಯಾವುದೇ ಬದಲಾವಣೆ ಮಾಡಿಕೊಂಡಿಲ್ಲವಾದರೂ ಇಷ್ಟೂ ಕಥೆಯ ಹಿಂದಿನ ಧ್ವನಿ ಸೂಕ್ಷ್ಮಗಳನ್ನು ಅವರ ಚಿಂತನಶೀಲ ಮನಸ್ಸು ಗ್ರಹಿಕೆಗೆ ತೆಗೆದು ಕೊಂಡು, ಘಟನೆಗೆ ಕಾರಣವಾದ ಮನಸ್ಸುಗಳ ವಿಶ್ಲೇಷಣೆಗೆ ಹೊರಟರು. ಅಹಲ್ಯೆ ಗೌತಮ ಪಾತ್ರಗಳನ್ನು ಹೊಸ ಆಯಾಮದಿಂದ ನೋಡಲು ಪ್ರಯತ್ನಿಸಿದರು, ವಾಲ್ಮೀಕಿ ರಾಮಾಯಣದ ಅಹಲ್ಯೆ ತೀರಾ ಸಾಮಾನ್ಯಳಂತೆ ಕಾಣುತ್ತಾಳೆ. ತಾನೆಸಗಿದ ಕ್ರಿಯೆಯ ಬಗ್ಗೆ ಪಶ್ಚಾತ್ತಾಪವಾಗಲೀ ಅಥವಾ ಅದನ್ನೆಸಗುವ ಮೊದಲಿನ ಮಾನಸಿಕ ತಳಮಳವಾಗಲೀ ಮೂಡಿಬಂದಿಲ್ಲ. ನೀತಿ ಅನೀತಿಯ ಪ್ರಶ್ನೆಗಳು ಅವಳನ್ನು ಕಾಡಿದಂತೆ ಕಾಣಿಸುವುದಿಲ್ಲ. ಗೌತಮನ ವೇಷದಲ್ಲಿ ಬಂದವನು ಇಂದ್ರನೆಂದು ತಿಳಿದರೂ, ದೇವೇಂದ್ರನೇ ರತಿ ಸುಖಕ್ಕಾಗಿ ಪ್ರಾರ್ಥಿಸುತ್ತಿರುವನಲ್ಲ ಎಂದೆನಿಸಿ, ಯಾವ ಪ್ರತಿರೋಧವನ್ನು ತೋರದೆ ಸುಲಭವಾಗಿ ಸಹಮತಳಾಗುತ್ತಾಳೆ, ಪತಿವ್ರತೆ ಎನಿಸಿಕೊಂಡವಳು ಇಷ್ಟು ಸುಲಭವಾಗಿ ತನ್ನನ್ನು ಒಪ್ಪಿಸಿಕೊಳ್ಳುವುದು ಪಾತಿವ್ರತ್ಯಕ್ಕೆ ಧಕ್ಕೆಯಾಗುವುದೆಂಬ ಭೀತಿಯೂ ಇಲ್ಲದಿರುವುದು ವಿಚಿತ್ರವೆನಿಸುತ್ತದೆ; ವ್ಯಂಗ್ಯವೆನಿಸುತ್ತದೆ. ಬಹುಶಃ ಇದಕ್ಕೆ ಕಾರಣ, ಅಹಲ್ಯೆ ಗೌತಮರ ಜೀವನಸಂಗತಿಗಳು ರಾಮ ಕಥಾ ಪ್ರವಾಹದಲ್ಲಿ ಎಲ್ಲಿಯೋ ಒಮ್ಮೆ ಎದ್ದು ಬಿದ್ದ ನೀರಗುಳ್ಳೆ ಎನಿಸಿರಬೇಕು. ರಾಮ ಮಹಿಮೆಗೆ ಹೆಚ್ಚಿನ ಗರಿಯೊಂದನ್ನು ಜೋಡಿಸುವುದಷ್ಟೇ ಅಗತ್ಯ ಎನಿಸಿರಬೇಕು.

ಪು.ತಿ.ನ. ಅವರಿಗೆ ರಾಮ ಪಾತ್ರ ಇತರೆ ಗೀತನಾಟಕಗಳಲ್ಲಿ ಪ್ರಧಾನವೆನಿಸಿರಬಹುದಾದರೂ, ಇಲ್ಲಿ ಅದು ಕೇವಲ ಆನುಷಂಗಿಕ. 'ಅಹಲ್ಯೆ'-ಗೌತಮರು ಕಾಮ-ಪ್ರೇಮಗಳ ದ್ವಂದ್ವಕ್ಕೊಂದು 'ರೂಪಕ'ವಾಗಿ ಕಾಣುತ್ತಾರೆ. ಕಾಮ-ಪ್ರೇಮಗಳು ಅಹಲ್ಯೆ ಗೌತಮರ ದಾಂಪತ್ಯದಲ್ಲಿ ಮಾತ್ರವೇ ಮುಖ್ಯವಲ್ಲ. ಎಲ್ಲರ ಬದುಕಿನಲ್ಲಿ, ಆದರ್ಶ ದಾಂಪತ್ಯದ ನೆಲೆಯಲ್ಲಿ ಕಾಮ-ಪ್ರೇಮಗಳ 'ತಾತ್ವಿಕತೆ'ಯ ಚಿಂತನೆ ಬಹು ಮುಖ್ಯವೆನಿಸುತ್ತದೆ. ಆದ್ದರಿಂದಲೇ ಪು.ತಿ.ನ. ಕಾಮ-ಪ್ರೇಮಗಳ ಮೌಲ್ಯ, ಸ್ವರೂಪ, ಅನಿವಾರ್ಯತೆ ಅವುಗಳ ನಡುವಿನ ವ್ಯತ್ಯಾಸ- ಇತ್ಯಾದಿ ಪರಿಕಲ್ಪನೆಗಳ ಅನುಸಂಧಾನಕ್ಕೆ 'ಅಹಲ್ಯೆ'ಗೌತಮ ವೃತ್ತಾಂತವನ್ನು ಬತ್ತಿಯಾಗಿಸಿಕೊಂಡರು.

ಮನಃ ಶಾಸ್ತ್ರದ ಪ್ರಕಾರ 'ಕಾಮ' ಪ್ರಾಕೃತಿಕ ಪ್ರೇರಣೆ, ಈ ವಿವರಣೆಯನ್ನು ಪು.ತಿ.ನ. ಅವರು ಒಪ್ಪುತ್ತಾರಾದರೂ. ಇವುಗಳ ಜೊತೆಗೆ "ಆತ್ಮಾಧಾರಗಳಾದ ಭಾವಗಳನ್ನು ಅವಲಂಬಿಸಬೇಕೆನ್ನುತ್ತಾರೆ"
(ಶ್ರೀರಾಮ ಪಟ್ಟಾಭಿಷೇಕಂ ಪು-5)

"ಪ್ರಾಕೃತಿಕ ಪ್ರೇರಣೆಗಳು ಸುಖವನ್ನು ಅಪೇಕ್ಷಿದರೆ ಆತ್ಮಭಾವಗಳು ಸಂತೋಷವನ್ನು ಕೋರುತ್ತವೆ....." ಕಾಮ ತನ್ನ ಅರ್ಥಗಳ ದ್ವಾರಾ ಸುಖ ಸಂತೋಷಗಳ ನಡುವೆ ಸ್ಪಂದಿಸುತ್ತದೆ. ಅವರವರ ಪ್ರಕೃತಿ ಮತ್ತು ಆತ್ಮ ಸಂಸ್ಕಾರಗಳಂತೆ ಅವರವರ ಕಾಮ. (ದೀಪ ರೇಖೆ ಪು - 3)

ಇಂತಹ ಕಾಮದ ಸ್ವರೂಪವನ್ನು ಪು.ತಿ.ನ. ತಮ್ಮ ನಾಟಕದ ಪಾತ್ರಗಳ ಮೂಲಕ ಸ್ಪಷ್ಟ ಪಡಿಸುತ್ತಾರೆ, 'ಕಾಮ' ಬದುಕಿನಲ್ಲಿ ಅನಿವಾರ್ಯವಾದರೂ ಧರ್ಮಸಂಯಮಿತವಾದಲ್ಲಿ ಕ್ಷೇಮಕರವಾಗುತ್ತದೆ. ಪ್ರಾಕೃತಿಕ ಆನಂದಾಕಾಂಕ್ಷೆಗಳೆರಡೂ ಒಟ್ಟಿಗೆ ಸಾಧ್ಯವಾಗಬೇಕಾದಲ್ಲಿ 'ಧರ್ಮ'ವೆಂಬ ಮೌಲ್ಯವೊಂದನ್ನು ಅವಲಂಬಿಸಬೇಕಾಗುತ್ತದೆ. ಸಾಮಾಜಿಕ ಸಂದರ್ಭದಲ್ಲಿ 'ಧರ್ಮ'ವೆಂಬ ಮೌಲ್ಯವೊಂದನ್ನು ಅವಲಂಬಿಸ ಬೇಕಾಗುತ್ತದೆ. ಆದರ್ಶದಾಂಪತ್ಯಗಳ ಮೂಲಕ ಈ ಧರ್ಮದ ನಿರ್ವಹಣೆಯಾಗುತ್ತದೆ. "ಸುಖದಿಂದ ಸಂತೋಷಕ್ಕೆ ತರಲು ಧರ್ಮವೇ ಸೋಪಾನ" (ಕಾವ್ಯಕುತೂಹಲ, ಪು-138-39) ವಿವಾಹವ್ಯವಸ್ಥೆಯಿಂದ ಕುದುರುವ ಆದರ್ಶದಾಂಪತ್ಯದ ಚೌಕಟ್ಟಿನಲ್ಲಿ, ಪರಿಸ್ಪರರ ಅರಕೆಗಳ ಪೂರೈಕೆ ಅನಿವಾರ್ಯ ಕರ್ತವ್ಯವಾಗುತ್ತದೆ. ಈ ಕರ್ತವ್ಯಕ್ಕೆ ಚ್ಯುತಿಯಾದಾಗಲೇ ಅನಿಷ್ಟ ಪರಂಪರೆಗಳು ಒದಗುತ್ತವೆ. ಆದರೆ ಈ ಅನಿಷ್ಟಗಳ ಗರ್ಭದಲ್ಲಿಯೇ ಶುಭದ ಮೊಳಕೆಯೊಡೆಯುತ್ತದೆ.

'ಅಹಲ್ಯೆ' ನಾಟಕದಲ್ಲಿ ಅಹಲ್ಯೆ ಮತ್ತು ಗೌತಮರ ಜೀವನವನ್ನು ನಡೆದ ಘಟನೆಗಳನ್ನು ಪು.ತಿ.ನ. ಅವರ ಈ ತಾತ್ವಿಕೆ ಹಿನ್ನೆಲೆಯಲ್ಲಿ ಗಮನಿಸಿದಾಗ 'ಅಹಲ್ಯೆ'ಯ ಪತನಕ್ಕೂ, ಇಂದ್ರನ ಪತನಕ್ಕೂ, ಗೌತಮನ ಪತನಕ್ಕೂ, ಕಾರಣಗಳು ಸ್ಪಷ್ಟವಾಗುತ್ತವೆ. ಉದ್ದಿಶ್ಯಪೂರ್ವಕವಾಗಿ ಯಾರೂ ಅವರವರ ವೈಯಕ್ತಿಕ ಪತನಕ್ಕೆ ಕಾರಣರಾಗದಿದ್ದರೂ ಪರಿಸ್ಥಿತಿ, ಸನ್ನಿವೇಶಗಳು ಅವರನ್ನು ಆ ರೀತಿ ಯಾಗಲು ಅನುಕೂಲಿಸಿವೆ.

ಅಹಲ್ಯೆಯ ಜಾರತನಕ್ಕೆ ಅವಳು ವೈಯಕ್ತಿಕವಾಗಿ ಕಾರಣಳಾಗುವುದಕ್ಕಿಂತಲೂ ಹೆಚ್ಚಾಗಿ, ಅವಳ ಅಂತರಂಗದ ಆಸೆ, ಆಕಾಂಕ್ಷೆಗಳನ್ನು ಅರಿಯದೆ, ದಾಂಪತ್ಯ ಧರ್ಮವನ್ನು ಧಿಕ್ಕರಿಸಿ, ಅರ್ಥಹೀನವಾದ ರೀತಿಯಲ್ಲಿ ಆತ್ಮವಿಕಸನಕ್ಕೆ ದುಡಿಯುತ್ತಿರುವ ಗೌತಮನು ಅದಕ್ಕಿಂತಲೂ ಹೆಚ್ಚು ಜವಾಬ್ದಾರನಾಗುತ್ತಾನೆ. ಅದಕ್ಕೇ ಅವನೂ ತಪ್ಪಿತಸ್ಥನಾಗುವುದೇ ಅಲ್ಲದೆ, ತಪ್ಪಿನ ಅರಿವಿನಿಂದ ಪಶ್ಚಾತ್ತಾಪ ಪಡುವುದರ ಜೊತೆಗೆ ಸ್ವತಃ ಶಿಕ್ಷೆಯನ್ನು ವಿಧಿಸಿಕೊಳ್ಳುತ್ತಾನೆ. ಹಿಮಾಲಯದ ಶೀತಲ ಪರಿಸರದಲ್ಲಿ ಅಜ್ಞಾತನಾಗುಳಿದು ಜೀವನಪರಿಪೂರ್ಣತೆಗೆ ಬೇಕಾದ ಮೌಲ್ಯಗಳೇನೆಂಬುದನ್ನು ಅರಿತು ಹೊಸ ಮನುಷ್ಯನಾಗಿ, ನಿಜವಾದ ಆತ್ಮವಿಕಾಸದೊಂದಿಗೆ ಮರಳುತ್ತಾನೆ. ಧರ್ಮಶಾಸ್ತ್ರದಲ್ಲಿ ಜಾರಿಣಿ ಸತ್ತಾಗ ಜಾರಪತಿಗೂ ಮದುವೆಯಾದ ಪತಿಗೂ ಅಶೌಚವನ್ನು ವಿಧಿಸುತ್ತಾರೆಂಬ ಪ್ರಸ್ತಾಪವಿದೆ. ಆದ್ದರಿಂದಲೆ ಪು.ತಿ.ನ. ಅವರು "ಹಿಂದಿನವರು ಬಿಟ್ಟು ಹೋಗಿರುವ ಧರ್ಮಶಾಸ್ತ್ರ ಆಚಾರಸಂಹಿತೆಗಳ ಪುನರವಲೋಕನ ಮತ್ತು ವಿಮರ್ಶೆ ಅವಶ್ಯಕ" ಎನ್ನುತ್ತಾರೆ.

ಗೌತಮನಿಗೆ ಅಂತಹ ಒಂದು ಧಾರ್ಮಿಕ ವಿಧಿ (ಅಶೌಚ) ಈ ನಾಟಕದಲ್ಲಿ ಪ್ರಸ್ತುತವೆನಿಸಿದರೂ, ಪು.ತಿ.ನ.ಇದರ ಬಗ್ಗೆ ಇನ್ನೊಂದು ದೃಷ್ಟಿಯನ್ನು ತಳೆಯುತ್ತಾರೆ. ಅಹಲ್ಯೆಗೆ ಪಾಪ - ಪುಣ್ಯಗಳ ಅರಿವಿದೆ. ಮುನಿಸತಿಯಾದವಳು ಪರ ಪುರುಷನಿಗೆ ಆಸೆಗೆಯ್ದುದು ಪಾಪ, ಅನೀತಿ, ಅಧರ್ಮ ಎಂಬ ಪ್ರಜ್ಞೆ ಇರಿಸಿಕೊಂಡೂ, ಸುಪ್ತಕಾಮನೆಗಳ ಅದಮ್ಯ ಒತ್ತಡಕ್ಕೆ ಬಿದ್ದು ನೀತಿಬಾಹಿರಳಾಗುತ್ತಾಳೆ. ಸತೀ ಧರ್ಮಚ್ಯುತಳಾಗುತ್ತಾಳೆ. ಅಹಲ್ಯೆ ಸ್ವಭಾವತಃ ನೀತಿಗೆಟ್ಟವಳಲ್ಲ; ಕ್ಷುದ್ರ ಕಾಮಿಯೂ ಅಲ್ಲ. ಧರ್ಮ, ಕರ್ತವ್ಯಗಳನ್ನು ಪತಿಯಾದವನು ಸಮರ್ಪಕವಾಗಿ ನಿರ್ವಹಿಸಲಾಗದ್ದಕ್ಕಾಗಿ ಜೀವನ ಸಾರ್ಥಕತೆಯ ನಿಜಸ್ವರೂಪವನ್ನರಿತು ಬಾಳದಿದ್ದುದಕ್ಕಾಗಿ, ಕೈಹಿಡಿದವಳ ಅಂತರಂಗದ ಆಸೆಗಳನ್ನು ನಿರ್ಲಕ್ಷಿಸಿ, ಸ್ವರ್ಗ, ಇಂದ್ರಪದವಿಗಳನ್ನು ಹಂಬಲಿಸಿ, ಜಡತಪಸ್ಸಿನಲ್ಲಿ ತೊಡಗಿ ವ್ಯರ್ಥ ಚೇತನನಾಗಿ ಉಳಿದದ್ದಕ್ಕೆ ಕೊಟ್ಟಬೆಲೆ ಅಹಲ್ಯೆಯ ಪತನ. ಇದು ಅವಳ ಪಾಪದ ಕ್ರಿಯೆ ಎಂದು ಸಾಮಾನ್ಯ ಮನಸ್ಸಿಗೆ ಅನ್ನಿಸಿದರೂ 'ಪಾಪ' 'ಪುಣ್ಯ'ಗಳೆಂಬುದಕ್ಕೆ 'ಒಳಿತು' 'ಕೆಡುಕು'ಗಳೇ ಪರಿಣಾಮಗಳೆಂದು

ನಿರ್ಣಾಯಕನಾಗಿ ಹೇಳಲು ಆಗುವುದಿಲ್ಲ 'ಪಾಪ'ವೆನ್ನಿಸಿಕೊಳ್ಳಬಹುದಾ
ಕರ್ಮದಿಂದ ಶುಭ ಪರಂಪರೆಗಳೂ ಶುಭವೆನ್ನಿಸಿಕೊಳ್ಳಬಹುದಾ
ಕರ್ಮಗಳಿಂದ ಅಶುಭ ಪರಂಪರೆಗಳೂ (ಉಂಟಾಗುವುದು) ಹು
ಕೊಳ್ಳುವುದನ್ನು ಗಮನಿಸುವ ಪು.ತಿ.ನ. ಒಂದು ಕರ್ಮಕ್ಕೆ ಇ
ಒಳ್ಳೆಯದು, ಇದು ಒಳ್ಳೆಯದಲ್ಲ ಎಂಬ ಬೆಲೆಯಾಗಲಿ, ಒಂದು ವಸ್ತುವಿ
ಇದು ಬೇಕಾದ್ದು, ಇದು ಬೇಡವಾದ್ದು ಎಂಬ ನಿರ್ಣಯವಾಗಲಿ, ಆಯ
ಸಂದರ್ಭಗಳನ್ನು ಅವಲಂಬಿಸಿರುತ್ತವೆ. ಯಾವ ವಸ್ತು, ಕರ್ಮ
ವ್ಯಕ್ತಿಯವಿಷಯದಲ್ಲೂ ಯಾವ ಬೆಲೆಯೂ ಸಾರ್ವಕಾಲೀನವಲ್ಲ. ಅ
ಪರಿಸರಾವಲಂಬಿ, ಪರಸ್ಪರ ಪ್ರಯೋಜನಾವಲಂಬಿ (ದೀಪ ರೇಖೆ, ಪು
63) ಎಂದು ಸೂತ್ರೀಕರಿಸಿ ನುಡಿದಿರುವ ಇವರ ತಾತ್ವಿಕ ದೃಷ್ಟಿಯ
'ಅಹಲ್ಯೆ' ನಾಟಕದ ಹೃದಯ ಕೇಂದ್ರದಲ್ಲಿ ಕಾಣುತ್ತೇವೆ. ಪು.ತಿ.ನ. ಅವ
ಜೀವನದರ್ಶನದ ಮಹತ್ವದ ಮುಖವೊಂದನ್ನು ಇಲ್ಲಿ ಕಾಣುತ್ತೇವೆ.

ಮಾನವ ಜೀವನ ಸಂದರ್ಭದಲ್ಲಿ, ಧರ್ಮ-ಕಾಮಗಳ ಸೂ
ಸಂಬಂಧಗಳ ಒಗಟನ್ನು, ಅವೆರಡರ ನಡುವಿನ ಘರ್ಷಣೆ
ಪರಿಣಾಮಗಳನ್ನು ವಿವರಿಸಲು ಅವರು ಮಾಡಿಕೊಂಡ ಅಂಕ ಸಂಯೋಜ
ಸಂವಿಧಾನ ಕೌಶಲ್ಯಕ್ಕೆ ನಿದರ್ಶನವಾಗಿದೆ. ಪೂರ್ವಾಂಕ, ಮಧ್ಯಮಾ
ಮತ್ತು ಉತ್ತರಾಂಕಗಳು ಕಥೆಯ ಬೆಳವಣಿಗೆಗೆ ಸಹಕಾರಿಯಾಗಿರುವುದ
ಅಲ್ಲ, ಆತ್ಮಚೇತನದ ವಿಕಾಸದ ಹಂತಗಳನ್ನು ಒಂದು ಅನುಕ್ರಮದ
ಪ್ರಸ್ತುತ ಪಡಿಸುತ್ತದೆ. ಒಂದೊಂದು ಅಂಕದಲ್ಲಿ ಬರುವ ಸನ್ನಿವೇ
ವಿವರಗಳು, ಪಾತ್ರಗಳ ಚಿತ್ತಸ್ಥಿತಿಗಳ ಹೊರಮುಖದ ಅಭಿವ್ಯಕ್ತಿಗಳಾಗಿ
ಮೂರು ಅಂಕಗಳಲ್ಲಿ ಮುಂದುವರೆಯುವ ಕಥೆಯ ಏಕಸೂತ್ರತೆಯ
ನಿರ್ಧರಿಸುವಪಾತ್ರ 'ಕಾಮ', ಅಮೂರ್ತ ಕಲ್ಪನೆ, ಅದೃಶ್ಯ ಪ್ರೇರ
ಮೂಲಭೂತ 'ಪ್ರವೃತ್ತಿ'ಯಾದ ಕಾಮಕ್ಕೆ ಒಡ್ಡಿದ ವ್ಯಕ್ತಿ ಸಂಕೇತ ರೂಪ
'ಮಾರ' 'ಮದನ'. ಅಹಲ್ಯೆ, ಗೌತಮ, ಇಂದ್ರರ ಜೀವನದ
ಸ್ಥಿತ್ಯಂತರಗಳಿಗೆ ಮದನನೇ ಕಾರಣ, ಅವನೇ ಇವರೆಲ್ಲರ ಜೀ
ನಿಯಂತ್ರಕ. 'ಕಾಮ' ರೂಪದಲ್ಲಿನ 'ವಿಧಿ'ಯೇ ಇವನು, ಹೆಸರಿನಿಂ
'ಅಹಲ್ಯೆ'ಯೇ ಕೇಂದ್ರ ಪಾತ್ರವಾದರೂ. ಆ ಪಾತ್ರದ ಬಹು
ಪರಿಸ್ಥಿತಿಗಳಿಗೆ ಕಾರಣನಾಗುವ, ಅಮೂರ್ತರೂಪದಲ್ಲಿ ಮನಃ ಸಂಚಲ

ಉಂಟುಮಾಡುವ ಘಟನೆಗಳು ಸಂಭವಿಸಲು ಪ್ರಚೋದಿಸುವ ಕಾಮ ಅಥವಾ ಮದನನೇ ಕೇಂದ್ರ ಪಾತ್ರ. ಜಗತ್ತಿನಲ್ಲಿ ಅತ್ಯಂತ ಪ್ರಬಲಶಕ್ತಿ ಕಾಮ'. 'ಕಾಮ' ಪ್ರಜ್ವಲಿಸಿದರೆ ಎಷ್ಟೊಂದು ಸಂಕ್ಷೋಭೆ; ಅನರ್ಥ. ಇವನ ಈ ವಿಪ್ಲವಕಾರಿ ಕೆಲಸಗಳು ವ್ಯಕ್ತಿಗಳ ಬದುಕಿನೊಂದಿಗೆ ಸರಸವಾಡುತ್ತವೆ. ಅದಕ್ಕೇ ಕವಿ ಅವನನ್ನು 'ಕುಚೋದ್ಯಗಾರ' ಎಂದು ಕರೆಯುತ್ತಾರೆ. ಇವನಿಂದ ಅನರ್ಥಗಳಾಗಬಾರದೆಂದು 'ಕಾಮ'ನನ್ನು

"ಹುಲುಬಯಕೆ ಬಾ ಎನಲು, ಓ ಎಂದು ಬಾರದಿರು
ವಾತಾಪಿಯಂದದೊಳು ಬಾಳನೊಡೆದು
ಮೊಗ್ಗಿನೊಳು ಕಂಪಂತೆ, ಚೇತದೊಳು ಬಳೆಯುತ್ತಾ
ಸಮಯವರಿತರಳಿ ಬಾ ಒಲವೆ ನಲಿದು"

(ಅಹಲ್ಯೆ-ಪೂರ್ವಾಂಕ-ನಾಂದಿ-ಪು-1)

-ಎಂದು ಪ್ರಾರ್ಥಿಸುತ್ತಾರೆ ಅಪಕ್ವ ಮನಃ ಸ್ಥಿತಿಯಲ್ಲಿ, ಅಕಾಲದಲ್ಲಿ ಕ್ಷುದ್ರಬಯಕೆಗಳು ಆಹ್ವಾನಿಸುತ್ತಿದ್ದಂತೆ ಬಂದು ಬಿಟ್ಟರೆ ಅನಾಹುತಗಳು, ದುರಂತಗಳು ಸಂಭವಿಸುವುದರಲ್ಲಿ ಅನುಮಾನವಿಲ್ಲ. ಆದ್ದರಿಂದ ಕಾಲದಕೋಶದಲ್ಲಿ ಹುದುಗಿದ್ದು, ಮಾಗಿದ ಸ್ಥಿತಿಯಲ್ಲಿ ಬಂದಾಗ ಹೂವಿನ ಕಂಪಿನಷ್ಟೇ ಸಹಜ; ಹಿತ ಎನಿಸುತ್ತದೆ.

ದೇವದಾನವ-ಮಾನವ ಯಾರೇ ಆಗಲಿ, ಈ ಕಾಮದಾ ಕರ್ಷಣೆಯಿಂದ ತಪ್ಪಿಸಿಕೊಳ್ಳಲಾರರು ನಿಜ, ಆದರೆ ಆ 'ಕಾಮ' ಪ್ರೇಮವಾಗಿ, ವಾಲಒಗಿ ಬರಬೇಕು. 'ಕಾಮ' ಕೋಶದಲ್ಲಿ ಅಶುಭ ಅನರ್ಥ ಪರಂಪರೆಯಿದ್ದರೆ, ಪ್ರೇಮದಲ್ಲಿ 'ಶುಭ'ವಿದೆ; ಸುಖವಿದೆ; ಪ್ರಸನ್ನತೆಯಿದೆ; ತಂಪಿನ ನೆಳಲಿದೆ; ಹಿತದ ಬೆಳಕಿದೆ. ಹಾಗಾಗಿ ಕಾಮ ಪ್ರೇಮವಾಗುವ ಕ್ರಿಯೆಯನ್ನು ಅದಕ್ಕೆ ಸಮಾಂತರದಲ್ಲಿಯೇ ಸುಖಾಕಾಂಕ್ಷೆಯ ಚೇತನಗಳು ಆನಂದಾಕಾಂಕ್ಷೆಯತ್ತ ಹೊರಳುವುದನ್ನೂ ಪತಿತ ಚೇತನಗಳು ಪಾವನವಾಗುವುದನ್ನೂ ಅಂಕಸಂಯೋಜನೆ ಸಮರ್ಪಕವಾಗಿ ವ್ಯಂಜಿಸುತ್ತದೆ.

ಸ್ವರ್ಗದ ವೈಭವದರಸ ಇಂದ್ರ ಪೂರ್ವಾಂಕದಲ್ಲಿ,

ಪ್ರವೇಶಿಸುತ್ತಿದ್ದಂತೆ, ವಿಚಿತ್ರ ಕಾಮನೆಗಳಿಂದ, ಅವ್ಯಕ್ತ ಆನಂದದಿ
ತುಂಬಿದ ಅವನ ಮನಸ್ಸಿಗೆ ರಂಭೆಯ ಆರ್ತಧ್ವನಿ ಅಪಶೃತಿಯೆನಿ
ಅವಳಿಗಾದ ಅವಮಾನ ತನ್ನದೇ ಎಂದು ಭಾವಿಸಿದರೂ, ಆತನ ಕೇಡ
ಎಣಿಸದೆ, ಪುಷ್ಕರನಿಂದ ಪರಿಚಯ ಪಡೆದ 'ಜಿತಕಾಮ'ನ
ಖ್ಯಾತಯೋಗಿಯೂ ಆದ ಗೌತಮನ ಮನದಾಳವರಿಯಲು, ಕಾಮ
ನೆರವನ್ನು ಯಾಚಿಸುತ್ತಾನೆ. ಸ್ವರ್ಗದ ದೇವತೆಗಳ ನಿರ್ವೀರ್ಯ ನಿಸ್ಸ
ಬದುಕಿಗೆ ಬೇಸತ್ತ ಕಾಮನಿಗೆ ಗೌತಮನ ಸ್ವರ್ಗಾಕಾಂಕ್ಷೆಯ ಬಯಕೆ
ಉದ್ದೇಶ ತಿಳಿದಾಗ ಆಶ್ಚರ್ಯವಾಗುತ್ತದೆ; ಇಂದ್ರನಿಗೆ, ತನ್ನ ಪದ
ಸಂಚಕಾರ ಬಹಬಹುದೆಂದು, ಭಯವಾಗುತ್ತದೆ. ಕಾಮನ ನೆರವಿನಿ
ಗೌತಮನನ್ನು ಕೆಣಕಲು ಬಯಸಿ ತಾನೇ ಕೀಟಲೆಗೆ ಒಳಗಾಗುತ್ತಾನೆ. ನೆಲ
ಸ್ಪರ್ಷದೊಂದಿಗೆ ಮಾನವ ಸಹಜ ದೌರ್ಬಲ್ಯಗಳು ಅವನ
ಮುತ್ತಿಕೊಳ್ಳುತ್ತವೆ. 'ಪರಸತಿಮೋಹ' ತನಗೆ ತರವಲ್ಲವೆಂದು ಕೊಳ್ಳುತ್ತ
ಅಹಲ್ಯೆಯ ಸೌಂದರ್ಯಕ್ಕೆ ಸ್ಪಂದಿಸುತ್ತಾನೆ. ಅವಳ ಸಂಗ ಬಯಸುತ್ತಾ
ಅವಳ ಅತೃಪ್ತ ಬಯಕೆಗಳ ವಾಸನೆ ಹಿಡಿದು ಉರುಬುತ್ತಾನೆ.

ಅಹಲ್ಯೆಯ ಸ್ಥಿತಿಯೂ ದಾರುಣವಾಗಿದೆ. ಹೊರಗಿನ ಗುಡುಗ
ಮಿಂಚು ಸಿಡಿಲು ಅವಳ ಅಂತರಂಗ ಸ್ಥಿತಿಯ ಬಾಹ್ಯ ಅಭಿವ್ಯಕ್ತಿಯಾಗಿ
ಗೌತಮನ ದೇವೇಂದ್ರ ಪದವಿಯ ಬಯಕೆಯಿಂದ ತಮಗಾಗು
ಪ್ರಯೋಜನವಾದರೂ ಏನು ಎಂಬುದು ಅಹಲ್ಯೆಯ ಆಲೋಚ
ಮೊದಲೇ ನೋವು, ನಿಟ್ಟುಸಿರು, ನಿರಾಸೆಗಳಿಂದ ಚಡಪಡಿಸುತ್ತಿದ್ದ ಮನಸ್ಸಿ
ಇಂದ್ರನರೂಪ, ವೈಭವಗಳು ಮಹಿಮೆಗಳು ಅವನೆಡೆಗೆ ತುಯ್ಯುವ
ಮಾಡುತ್ತವೆ. ಆದರೂ ಪ್ರಯತ್ನ ಪೂರ್ವಕವಾಗಿ ಆಕಾಂಕ್ಷೆಗಳನ್ನು ಹತ್ತಿ
ಅನಿಷ್ಟ ನಿವಾರಣೆಗೆಂದು ಇಂದ್ರ ಪೂಜೆ ಮಾಡುವಳಾದರೂ ಅ
ಕಾಮಪೂಜೆಗೆ ನಾಂದಿಯಾಗುತ್ತದೆ. ಅವಳಿಗೆ ಸ್ವಲ್ಪ ಪ್ರಚೋದನೆ
ಬೆಂಬಲ ಬೇಕಾಗುತ್ತದೆ. ಆ ಕಾರಣ ಭೀತಿ, ತಳ್ಳಂಕಗಳು ಅಹಲ್ಯೆ
ಮುಂಬರುವ ಅನಿಷ್ಟಗಳಿಗೆ ಸಂಕೇತವೆನಿಸುತ್ತದೆ. ಗಂಡನ ಅನುಪಸ್ಥಿತಿಯ
ಹೆಡಿಬಿಚ್ಚುತ್ತಿರುವ ಸುಪ್ತ ಕಾಮನೆಗಳು, ಮರ್ಯಾದೆಯ ಮಿತಿಯೊಳ
ಧರ್ಮದ ಸರಹದ್ದಿನೊಳಗೆ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗಲೆ
"ನಿನ್ನ ಹೃದಯ ಧರ್ಮವರಿತು ಇನ್ನಾದರೆಚ್ಚರು" ಎಂದು ನುಡಿದ ಕಾಮ

ಮಾತು ಅಹಲ್ಯೆಯ ಮಾತೂ ಆಗುತ್ತದೆ.

ಪ್ರೇಮಕೃಪಣತ್ವದಿಂದ ಹೃದಯಧರ್ಮವನ್ನು ವಂಚಿಸಿ, ಪ್ರಕೃತಿ ಪ್ರೇರಣೆಗೆ, ಕಿವುಡಾಗುವುದು ಸಾರ್ಥಕ ಬದುಕಿನ ಲಕ್ಷಣವಲ್ಲ ಎನ್ನುವ ಮಾತು, ಅಹಲ್ಯೆ, ಗೌತಮ, ಇಂದ್ರರ ಅಂತರ್ವಾಣಿಯಾಗಿ ಕಾಮ ಪ್ರಭಾವದ ಸೆಳೆತಕ್ಕೆ ಮೂವರೂ ಒಳಗಾಗುತ್ತಾರೆ. ದುಃಖ, ದುಗುಡ, ಅಸ್ವಸ್ಥತೆಯಿಂದ ಕೂಡಿದ ಅಹಲ್ಯೆ:

"ಎಂಥ ಮರವೆಯೋ ಇನಿಯ ಇನಿತೊಂದು
ಹಂಬಲಸು ಬಿಟ್ಟೆ ನನ್ನ ಒಂಟಿಯೊಳಗಿಟ್ಟೆ !
ಮನವು ಮುರುಟಿತು ಆಸೆ ಸೂರಕೆ
ಬದುಕು ತೆರವೊ ನೂರುತವಕಕೆ
ಏನು ಹೇಳಲಿ ನಿನ್ನ ಸ್ವಾರ್ಥಕೆ "

(ಅಹಲ್ಯೆ - ಪುಟ: 34)

-ಎಂದು ಗೌತಮನನ್ನು ದೂರುವ ಮಾತಿನಲ್ಲಿ ಕಮರಿದ ಆಸೆಗಳನ್ನು ತಳೆದ ಒಂಟಿ ಬದುಕಿನ ಶೂನ್ಯತೆಯ ಭಯಂಕರತೆ, ಅಂತರಂಗದ ವೇದನೆಯ ತೀವ್ರತೆಗಳು ಸಾಂದ್ರವಾಗಿ ಮೂಡಿವೆ. ಅದರಲ್ಲಿಯೂ 'ಎನಿತು ದೂರಕೆ ಸರಿದುನಿಂತೆ......... ನನ್ನ ಒಂಟಿಯೊಳಗಿಟ್ಟೆ' ಎನ್ನುವ ಸ್ಥಾಯಿ ಪಲ್ಲವಿಯಿಂದ ಅವಳ ನೋವಿನ ಗಹನತೆ ಹೆಚ್ಚುತ್ತಾ ಹೋಗುತ್ತದೆ.

ಅಹಲ್ಯೆಯ ಕಮರಿದ ಆಸೆಗಳು, ದೌರ್ಬಲ್ಯ, ಒಂಟಿತನದ ಶೂನ್ಯತೆ, ವೇದನೆಯ ತೀವ್ರತೆಗಳ ದುರ್ಲಾಭ ಪಡೆದು, ಬಲಾತ್ಕಾರದಿಂದ ಜಾರತನಕ್ಕೆಳಸದೆ ಅವಳೇ ತನ್ನತ್ತ ಬರುವಂತೆ ಮಾಡುತ್ತಾನೆ. ಕಾಮನ ಕೈವಾಡ ಏಕಕಾಲದಲ್ಲಿ ಗೌತಮ, ಇಂದ್ರ ಅಹಲ್ಯೆಯರನ್ನು ಎಚ್ಚರಗೊಳಿಸುತ್ತದೆ.

ಗೌತಮವೇಷದ ಮರೆಯ ಇಂದ್ರ ಅಹಲ್ಯೆಯ ಅರಿವಿಗೆ ಬಂದರೂ, ಮೊದಲು ತನ್ನನ್ನು ನಿಯಂತ್ರಿಸಿಕೊಂಡು 'ಸತಿಯಗೆಲೆ ಬಯಸದಿರು, ಮರೆಯಾಗುನಿಂದು' -ಎಂದು ಎಚ್ಚರಿಸುವುದು,

ತುಟಿಯಾಚೆಗಿನ ಮಾತಾಗುವುದೇ ಹೊರತು ಅಂತರಂಗದ ಮಾತಾಗುವುದಿಲ್ಲ. ಇಂದ್ರ ವೈಭವ, ಸೌಂದರ್ಯಗಳು, ಕಣ್ಮುಂದೆ ಮಿಂಚಿ ಕ್ಷಣಾರ್ಧದಲ್ಲಿ ಸಂಯಮದ ಕಟ್ಟೊಡೆದು ಇಂದ್ರನ ವಶವರ್ತಿಯಾಗುತ್ತಾಳೆ; ಗೌತಮನ ಮಡದಿ, ಪತಿವ್ರತೆ ಅಹಲ್ಯೆ ಸತ್ತು, ಜಾರಿಣಿಯಾಗಿ ಮರುಹುಟ್ಟು ಪಡೆಯುತ್ತಾಳೆ.

ಅದೇ ಸಮಯಕ್ಕೆ ಗೌತಮನಿಗೆ ಜ್ಞಾನೋದಯವಾಗತ್ತದೆ. ಧರ್ಮ-ಕಾಮಗಳ ಸಂಘರ್ಷ ನಡೆದು ಕಡೆಗೆ ದಾಂಪತ್ಯದ ಚೌಕಟ್ಟಿನೊಳಗೆ ನಿರ್ವಹಣೆಗೊಳ್ಳುವ ಧರ್ಮ ಸಂಯಮಿತ ಕಾಮದ ಕರೆಗೆ ಓಗೊಟ್ಟು, ಪ್ರಕೃತಿ ಧರ್ಮವನ್ನು ತಣಿಸಲು, ತ್ಯಾಗ ತಪಸ್ಸುಗಳ ನೀರಸ ಬದುಕಿನಲ್ಲಿ ಒಲವಿನ ಒರತೆಯನ್ನು ಚಿಮ್ಮಿಸಲು ಬರುತ್ತಾನೆ. ಇಲ್ಲಿಯವರೆಗೆ ಮಡದಿ ಅಹಲ್ಯೆಯ ಆಂತರ್ಯವರಿಯದೆ ಎಸಗಿದ ಅನ್ಯಾಯವನ್ನು ಸರಿಪಡಿಸಲು ಧಾವಿಸಿ ಬರುತ್ತಾನೆ, ಆದರೆ ವಿಧಿ ವಿಲಾಸವೇ ಬೇರೆಯಾಗಿರುತ್ತದೆ. ಪ್ರತ್ಯಕ್ಷವಾಗಿ, ಅಹಲ್ಯೆ - ಇಂದ್ರರಿಂದ ನಡೆದ ಹಾದರ ಅವನನ್ನು ಸ್ತಂಭೀಭೂತ ಗೊಳಿಸುವಷ್ಟೇ ಅಲ್ಲ, ಕ್ರೋಧೋನ್ಮತ್ತನನ್ನಾಗಿಸಿ, ಶಾಪದ ಮೂಲಕ ಕ್ರೂರ ಶಿಕ್ಷೆಗೆ ಒಳಗಾಗಿಸುವಂತೆ ಮಾಡುತ್ತದೆ.

ಪ್ರಶಾಂತ ಕ್ಷಣಗಳಲ್ಲಿ ನಡೆಸಿದ ಆತ್ಮವಿಶ್ಲೇಷಣೆಯಿಂದ, ಮಡದಿಯ ಅಪರಾಧ, ಅಕೃತ್ಯಗಳಿಗೆ ತಾನೇ ಹೊಣೆಗಾರನೆಂಬ ಸತ್ಯದ ಅರಿವು.

"ಕಾಮವಶೀ ಕ್ರೋಧವಶೀ ನಷ್ಟಾತ್ಮಂವಿರಸಿ!
ತನ್ನನೆ ತಾ ಗೆಲ್ಲದವಂ ಇಕೊ ಈ ಹುಸಿ ತವಸಿ!"

(ಅಹಲ್ಯೆ, ಪುಟ-64)

-ಎಂದು ತನ್ನನ್ನು ತಾನೆ ನಿಂದಿಸಿ ಕೊಳ್ಳುವಂತೆ ಮಾಡುತ್ತವೆ. ಆತ್ಮೋದ್ಧಾರ, ಇಂದ್ರ ಪದವಿಗಳ ಬಯಕೆಯ ಬೆನ್ನೇರಿ ಗ್ರಾಹಸ್ತ ಧರ್ಮದ ಉಲ್ಲಂಘನೆ ಮಾಡಿದ್ದು ಅಕ್ಷಮ್ಯ ಅಪರಾಧವೆನಿಸುತ್ತದೆ.

ಆತ್ಮವಿಕಸನದ ಪ್ರಯತ್ನದಲ್ಲಿದ್ದ ಗೌತಮನ ಚೇತನ ವಿಕಾಸಕ್ಕೆ ಮೊದಲೇ ಕುಸಿಯುತ್ತದೆ. ಪು.ತಿ.ನ. ರವರು ಚೈತನ್ಯದವಿಕಾಸವನ್ನು 'ನಿದ್ರೆ,

ಸ್ವಪ್ನ, ಜಾಗೃತಿ, ಕಲೆ ಮತ್ತು ರಸ' ಈ ನೆಲೆಗಳಲ್ಲಿ ಗುರುತಿಸುತ್ತಾರೆ. ಗೌತಮನ ಆತ್ಮವಿಕಾಸವನ್ನು ಈ ನೆಲೆಗಳಿಂದಲೇ ಬೆಳೆಯುವುದನ್ನು ಗುರುತಿಸಬಹುದು. ನಿದ್ರೆ ಜಡಸ್ಥಿತಿ, ಸ್ವಪ್ನ, ಋತಶೂನ್ಯಸ್ಥಿತಿ, ಋತಬದ್ಧವಾದುದು ಜಾಗೃತ ಸ್ಥಿತಿ. ಗೌತಮನಿಗೆ ಆ ಋತಬದ್ಧ ಜಗತ್ತನ್ನು ಅರಿಯ ಬೇಕಾಗಿದೆ. ಋತವೆಂಬುದನ್ನು ಒಂದು ನಿರ್ದಿಷ್ಟ ಪರಿಭಾಷೆಯೊಂದಿಗೆ ಬಂಧಿಸಲಾಗದಿದ್ದರೂ, ಜಗತ್ತಿನ ಸೃಷ್ಟಿ ಚಾಲನೆಗೆ ಹಿನ್ನೆಲೆಯಾಗಿ, ಬರುವ ಒಂದು ಅಗೋಚರಶಕ್ತಿಯೇ 'ಋತ'ವಿರಬೇಕು, ಮರಚಿಗುರುವುದು, ಹೂವರಳುವುದು, ನದಿ ಹರಿಯುವುದು, ಹಗಲು - ರಾತ್ರಿ ಕತ್ತಲು-ಬೆಳಕು-ಎಲ್ಲವೂ ಋತವೆ ; ಹಾಗೆಯೇ ಗೌತಮನ ದಾಂಪತ್ಯದ ಮೌಲ್ಯವೂ ಒಂದು 'ಋತ'. ಈ ಋತಕ್ಕೆ ವಿರೋಧವಾಗಿ ಪ್ರೇಮ ಕೃಪಣತ್ವ ಅಸ್ವತಂತ್ರತೆ, ಅಹಮಿಕೆಗಳಲ್ಲಿ ಮುಂದುವರಿದ ಗೌತಮನಿಂದಾಗಿಯೇ 'ಅಹಲ್ಯೆ'ಯ ಮತ್ತು ಅವನ ದುರಂತಗಳು ಸಂಭವಿಸುತ್ತವೆ. ಈಗ ಅವನಿಗೆ ಉಳಿದ ದಾರಿಯೆಂದರೆ ಲೋಕದ ಋತ ಸ್ವರೂಪವೇನೆಂದರಿತು ಜಾಗೃತನಾಗಿ ವಿಧಿಲೋಕದ ಸುಖಕ್ಕೂ ಸತ್ಯಾಶ್ರಯವಾದ ರಸಲೋಕದ ಆನಂದಕ್ಕೂ ಪಾತ್ರನಾಗುವುದು. ಇಂದ್ರಿಯವಶತೆಯಿಂದ ಬಿಡಿಸಿಕೊಳ್ಳಬೇಕು; ಕಾಮಕ್ರೋಧ ಲೋಭಾದಿ ಕ್ಷುಲ್ಲಕ ಭಾವಗಳಿಂದ ಮುಕ್ತನಾಗಬೇಕು. ಸ್ವವಶತೆಯಿಂದ ತನ್ನಲ್ಲಿಯೇ ತಾನು ಮುಳುಗಿರುವುದರಿಂದ ತಪ್ಪಿಸಿಕೊಳ್ಳಬೇಕು. 'ಪ್ರೇಮಕೃಪಣ', ಅಸ್ವತಂತ್ರ, ಹುರುಳಬಾಳ ಮರುಳಜೋಗಿ, ತಪದಲೋಭಿ, ಕರಣಕಾಯುವಾಳು ಎಂಬ ಅಭಿಧಾನಗಳಿಂದ ತನ್ನನ್ನು ಬಿಡಿಸಿಕೊಂಡು ಹೃದಯ ಧರ್ಮದ ಬಾಳಿಗೆ ಅಣಿಗೊಳ್ಳಬೇಕು; ಧರ್ಮದ ಗುಡಿಯನ್ನು ಬೆಳಕಿಗಿಟ್ಟು ಮುಸುಕನ್ನು ಕಿತ್ತೊಗೆದು ರೂಢಿಯ ಧರ್ಮಕ್ಕೆ ಸಜ್ಜಾಗಬೇಕೆಂಬ ಪ್ರಜ್ಞೆಯೆಚ್ಚರದೊಂದಿಗೆ, ಪಶ್ಚಾತ್ತಾಪವೂ ಮುತ್ತಿ 'ವಿಶ್ವಾತ್ಮ ಚಿಂತನೆ 'ಯನ್ನೇ ಗುರಿಯಾಗಿಸಿಕೊಂಡು 'ಆತ್ಮವಿಸಂಬೋಧಿ' ಯಾಗಲು, ಹಿಮಗಿರಿಯ ಏಕಾಂತಕ್ಕೆ ಹೊರಡುತ್ತಾನೆ.

ಪೂರ್ವಾಂಕ ದುರಂತ ಚಿತ್ರಣಗಳಿಂದ, ಅಪಕ್ವಮನ, ಸ್ಥಿತಿಗಳಿಂದ, ಅನಿರೀಕ್ಷಿತವಾಗಿ ಎದುರಾಗುವ ಅನಿಷ್ಟಗಳಿಂದ ತುಂಬಿ ಹೋಗಿದೆ. ಇಲ್ಲಿಯೇ ಇಂದ್ರನ ಪ್ರವೇಶವಾಗಿ, ಆಶ್ರಮದ ನೆಮ್ಮದಿ, ಪ್ರಶಾಂತತೆಗಳನ್ನು ಕದಡಿ ಬದುಕಿನಲ್ಲಿ ತಳಮಳವೆಬ್ಬಿಸಿ, ಎಲ್ಲರನ್ನೂ ಕಷ್ಟಕೋಟಲೆಗೆ

ಗುರಿಯಾಗುವಂತೆ ಮಾಡಿ, ತಾನೂ ಕೋಟಲೆಪಟ್ಟು ದುರಂತದ ಭಾಗವಾಗುತ್ತಾನೆ.

ಗೌತಮ-ಅಹಲ್ಯೆಯರ ನಡುವೆ ಉಂಟಾದ ಕಂದರ, ಅವರಿಬ್ಬರ ಮಾನಸಿಕ ಯಾತನೆಗಳು ತಾತ್ಕಾಲಿಕ. 'ದಾಂಪತ್ಯ'ದನಂಟು ಸ್ಥಿರವಾದುದು. ವಿವಾಹ ವ್ಯವಸ್ಥೆಯಿಂದ ಒಬ್ಬರಿಗೊಬ್ಬರು ಬದ್ಧರು. ಗೌತಮ ಶಾಪವನ್ನು ಕೊಟ್ಟು ಅಹಲ್ಯೆಯನ್ನು ಕಾಡಿದ. ಆದರೆ ಅದು ಅವನನ್ನೂ ಬಿಡದೆ ಹಿಂಸೆಗೆ ಗುರಿಮಾಡಿತು. ಶಾಪವೆಂಬುದು ಎರಡಲಗಿನ ಕತ್ತಿಯಂತೆ ಪಡೆದವರನ್ನು ಮಾತ್ರವಲ್ಲ, ಕೊಟ್ಟವರನ್ನೂ ಭೇದಿಸುತ್ತದೆ.

'ಕಾಮ' ವಿಧಿಯಂತೆ, ಅನಿಷ್ಟದಂತೆ, ಮೂಡಿಬಂದು ಅವರವರ ಹೃದಯಧರ್ಮ, ಪ್ರಕೃತಿಗಳನ್ನು ಪ್ರೇರಿಸುವ ನೆವದಲ್ಲಿ ಉತ್ಪಾತಗಳನ್ನು ರಚಿಸಿ ಜಡತೆಯ ಕೋಶಾವಸ್ಥೆಗೆ ಸಲ್ಲುತ್ತಾನೆ. ಆದರೆ 'ಕಾಮ'ನೇ ಜಗದ ಸಂಚಾಲಕ ಶಕ್ತಿ, ಚೈತನ್ಯ ಶಕ್ತಿ. ಅಂಥಾದ್ದರಲ್ಲಿ ಜಡಸ್ಥಿತಿಗೆ ಸಂದದ್ದೇ ಸೃಷ್ಟಿಯಲ್ಲಿ ನೀರಸತೆ, ಅನಾಸಕ್ತಿ, ನಿಷ್ಕ್ರಿಯತೆಗಳು ಆವರಿಸಿಬಿಡುತ್ತವೆ.

ಸ್ವರ್ಗ ಮರ್ತ್ಯಗಳ ನೀರಸಬದುಕು, ಇಂದ್ರ ಅಹಲ್ಯೆಯರ ಪಶ್ಚಾತ್ತಾಪ, ಕೊರಗು, ಕಣ್ಣೀರು ನಿಲ್ಲಲು 'ಕಾಮ' ಪ್ರೇಮವಾಗಿ, ಒಲವಾಗಿ ಅವತರಿಸಿ ಬರಬೇಕು. ಜಡಸ್ಥಿತಿ ಹೀಗೇ ಮುಂದುವರಿದರೆ ಸೃಷ್ಟಿಯ ವಿನಾಶ, ಸ್ಥಗಿತತೆ, ಕಾಮವನ್ನು ಕೂಡಲೇ ಎಚ್ಚರಿಸಬೇಕಾಗುತ್ತದೆ. ರಾಮಾಗಮನ ಶುಭ ಸೂಚನೆಯಾಗುತ್ತದೆ. ಕಾಮನನ್ನು ಎಬ್ಬಿಸುವ ಸಾಹಸದ ಜವಾಬ್ದಾರಿ ರಂಭೆಯ ಪಾಲಿಗೆ ಸಂದಿದೆ. ಜೀವಜಗತ್ತು ಒಲವಿನ ಉದಯಕ್ಕೆ ಉತ್ಸಾಹದಿಂದ ಕಾದಿದೆ. ಮಾಗಿ ಮುಗಿದು, ಮಂಜು ಮುರಿದು ಹೊಸಜೀವ ಚೈತನ್ಯ ತುಂಬಿಕೊಳ್ಳಲು ಹಂಬಲಿಸಿದೆ.

ಕಾಲಪ್ರವಾಹದ ಅರಿವಿಲ್ಲದೆ ಜಡನಿದ್ರೆಗೆ ಸಂದಕಾಮ, ಅಪ್ಸರೆಯ ಮಂಗಳ ಸುಪ್ರಭಾತಕ್ಕೆ ತನ್ನ ಪೂರ್ವದ ತುಂಟತನ, ಕುಚೋದ್ಯ - ಹುಡುಗಾಟ ಪ್ರವೃತ್ತಿಗಳನ್ನು ಕಳೆದುಕೊಂಡು, ಸಾತ್ವಿಕ, ಶಾಂತ, ಸೌಮ್ಯ, ಗಂಭೀರ ರೂಪನಾಗಿ ನಿದ್ರೆಯ ಕೋಶಾವಸ್ಥೆಯನ್ನು ದಾಟಿ,

"ಕಾಮತಪ್ತ ಚೇತನ ನಿಷ್ಕೃತಿಗೆ

ಭೋಗದೃಪ್ತದುರ್ಜನ ಧಿಃಕೃತಿಗೆ
ತಾಮಸರಿಗೆ ರಾಗದ ಬೆಳಕೀಯೆ
ವಿರಸಗಾಗೆ ಸಂಸಾರದ ಮಾಯೆ"

(ಅಹಲ್ಯೆ ಪು - 74 - 75)

-ಬರುತ್ತಾನೆ ಜೀವರುಗಳನ್ನು ಋತದ ರೀತಿಗೆ ಸಲ್ಲಿಸಲು ಅಣಿಯಾಗುತ್ತಾನೆ.

ಪ್ರೇಮದವತರಣವಾಗುತ್ತಿದ್ದ ಗೌತಮ ಹೊಸ ಮನುಷ್ಯನಾಗಿ ಆತ್ಮಚಿಂತನದ ಮೂಲಕ ಋತ, ಸತ್ಯ, ಸೃಷ್ಟಿ ತತ್ವಗಳನ್ನರಿತು ಪುಷ್ಟನಾಗಿ, ತುಷ್ಟನಾಗಿ, ದ್ವಂದ್ವಾತೀತನಾಗಿ ಬೆಳೆಯುತ್ತಾನೆ.

'ಕಾಮ'ದ ಸೆರೆಯೊಳಗೆ ನರಳುವ ಜೀವಿಗಳ ಆರ್ತತೆ ಕಿವಿ ತಾಕಿದಾಗ, 'ಕಾಮ' ಸಮಸ್ಯೆಯ ಬಗ್ಗೆ ನಡೆಸುವ ಗಾಢ ಚಿಂತನೆಯಿಂದ, ಅದರ ವ್ಯಾಪಕತ್ವವನ್ನು, ಸೃಷ್ಟಿಯ ಕರ್ಮಕ್ಕೆ ಇದರ ಅನಿವಾರ್ಯತೆಯನ್ನು, ಹೆಣ್ಣು ಗಂಡು ಸಂಬಂಧವನ್ನೂ ತಾತ್ವಿಕವಾಗಿ ಯೋಚಿಸಲು ಪ್ರಯತ್ನಿಸಿ ಸೋತರೂ ಮುಂದೆ, ಏಕಾಂತ ಸಮಾಧಿಗೆ ಸಂದು, ಕಾಮೋತ್ತರದೊಲವಿನ ದರ್ಶನ ಪಡೆಯುತ್ತಾನೆ.

ಜೀವಶೃತಿಯಾದ ಪ್ರೇಮಕ್ಕೆ ಹೊಂದಿಕೊಳ್ಳದೆ ಬಾಳುವೆ ಸಾಧ್ಯವಿಲ್ಲ ಆದರೆ ಅಹಂಕಾರ, ಸ್ವಾರ್ಥಗಳಿರುವಲ್ಲಿ ಪ್ರೇಮಕ್ಕೆ ಎಡೆಯೇ ಇಲ್ಲ. ಶಿವ-ಶಿವೆಯರಂತೆ ಹೊಂದಿ ಬಾಳುವ ಧರ್ಮದಲ್ಲಿಯೇ ಬದುಕಿನ ಪರಿಪೂರ್ಣತೆಯಿದೆ. ಸಂಸಾರ ಬಂಧನವಾಗಬಹುದೆಂದು ಅಳುಕಿದ್ದ ಗೌತಮ ಸುತ್ತಲಿನ ಪ್ರಕೃತಿಯಲ್ಲಿನ ಅನ್ಯೋನ್ಯತೆ ಸಾಮರಸ್ಯಗಳು ದಿಗ್ಭ್ರಮೆ ಮೂಡಿಸುತ್ತವೆ. ಸಮಸ್ತ ನಿಸರ್ಗದ ಕ್ರಿಯಾ ವ್ಯಾಪಾರಗಳೂ ಯಾವುದೋ ಒಂದು ಋತದ ನಿಯಮಕ್ಕೆ ಒಳಗಾಗಿ ನಡೆಯುತ್ತಿವೆ - ಎಂಬುದು ಮನವರಿಕೆಯಾಗುತ್ತದೆ.

ಒಂಟಿತನದಲ್ಲಿ ಸೃಷ್ಟಿ ಸಾಧ್ಯವಿಲ್ಲ. ಅಸ್ತಿತ್ವದಲ್ಲಿ ಪೂರ್ಣತೆಯೂ ಲಭಿಸುವುದಿಲ್ಲ. ಸಾಂಗತ್ಯವೇ ಬದುಕಿನ ಪರಿಪೂರ್ಣತೆಗೆ ಮೆಟ್ಟಿಲೆಂಬ ತತ್ವದರ್ಶನ ಅವನ ಕಣ್ಣು ತೆರೆಸುತ್ತದೆ.

"ಒಂದಕೊಂದು ಹಂಗ ತೋರಿ
ಮತ್ತೊಂದರ ಹಂಗ ಕೋರಿ
ಒಂದೆ ಬದುಕ ತುಂಬವೋಲ್
ಇಂದು ಎಲ್ಲ ಹೊಂದುತಿಹವು
ಸೂತ್ರದಲ್ಲಿ ಕೋದವೋಲ್"

-(ಅಹಲ್ಯೆ-ಪು-85)

ಕಾಣುತ್ತಿರುವ ನಿಸರ್ಗದಂತೆ ತನ್ನಿರವನ್ನಾಗಿಸಿಕೊಳ್ಳಲು ನಿರ್ಧರಿಸುತ್ತಾನೆ.

ಬದುಕು ಅರ್ಥಪೂರ್ಣವಾಗಲು, ಹಸನಾಗಲು ಅನಿವಾರ್ಯವಾದ ರಾಗ - ತ್ಯಾಗಗಳ ಸಮನ್ವಯ, ಸಮಷ್ಟಿ ವಿಕಾಸ, ವಿಶ್ವಾನಂದಗಳನ್ನು ಸಾಧಿಸಲು, ದಾಂಪತ್ಯ ಧರ್ಮವನ್ನು ನಿರ್ವಹಿಸಲು, ಧೀಮಂತಚೇತನದ ಅಗತ್ಯವಿರುತ್ತದೆ. ಗೌತಮ ಅಂತಹ ಚೇತನವಾಗಿ ರೂಪಾಂತರಗೊಂಡು ನಲ್ಮೆಯೊಂದನೆ ಕಾಂಬ ಕುಶಲ ದೃಷ್ಟಿ ನೋವುನಲಿವೆನ್ನದಿಹ ಪೂರ್ಣ ತುಷ್ಟಿಯ ಹಾರೈಕೆ ಹೊತ್ತು ಮರಳುತ್ತಾನೆ.

ಮಧ್ಯಮಾಂಕ ಬಹಳ ಪ್ರಮುಖವಾಗಿದೆ, ಕವಿ ನಿರೀಕ್ಷೆಯಂತೆ ಅವರ ತತ್ವದರ್ಶನದಂತೆ, ಜೀವ ಪಕ್ವಗೊಂಡು, ಉದಾತ್ತ ಚೇತನವಾದ ಹಂತವನ್ನು ಇದು ಬಿಂಬಿಸುತ್ತದೆ. ಗೌತಮನೇ ಈ ಅಂಕದ ಪ್ರಧಾನ ಪಾತ್ರ ಅವನ ಆತ್ಮೋನ್ನತಿಯ-ಪ್ರಕ್ರಿಯೆಗೇ ಮೀಸಲು, ಅವನ ಆ ವಿಕಾಸದ ಜೊತೆ ಜೊತೆಗೆ ಮಾರನೂ ಬೆಳೆಯುತ್ತಾನೆ. 'ಕಾಮ'ನಾಗಿ ಕೋಲಾಹಲ ಎಬ್ಬಿಸಿದವ ಈಗ ಪ್ರೇಮವಾಗುತ್ತಾನೆ. ಈಗವನು ಬಂದದ್ದು ಕವಿ ಬಯಸಿದಂತೆ, ವಾತಾಪಿಯಂತೆ ಬಾಳೊಡೆದು ಬರದೆ, ಸಮಯವರಿತರಳಿ ಕಂಪು ಬೀರುತ್ತ ಬರುತ್ತಾನೆ, ಅದಕ್ಕೆ ಜಗತ್ತಿನಲ್ಲಿ, ನಿಸರ್ಗದಲ್ಲಿ ಪ್ರಕ್ಷುಬ್ಧತೆಯಿಲ್ಲದೆ ಸೌಮ್ಯ, ಶಾಂತ ಪರಿಸರವಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಅಂತಃ ಪ್ರಕೃತಿ, ಬಾಹ್ಯಪ್ರಕೃತಿಗಳ ಸ್ವರೂಪ ಚಿತ್ರಣ, ಬಾಹ್ಯ ಪ್ರಕೃತಿ ಅಂತಃ ಪ್ರಕೃತಿಗೊಡ್ಡಿದ ಕನ್ನಡಿಯಾಗಿದೆ. ಇಡೀ ನಾಟಕದಲ್ಲಿ ಪ್ರಕೃತಿ ಒಂದು ಸಂಕೇತವಾಗಿ ನಿಲ್ಲುತ್ತದೆ.

ಮುಂದಿನ ಉತ್ತರಾಂಕ, ಮಧ್ಯಮಾಂಕದಲ್ಲಿ ಸೂಚನೆಯ ರೂಪದಲ್ಲಿನ ಶುಭ, ಪರಿಣಾಮವಾಗುವುದನ್ನು ವಿವರಿಸುತ್ತದೆ. ನಿರೀಕ್ಷಿಸಿದ, ಸೂಚಿತ ರಾಮಾಗಮನ, ಅಹಲ್ಯಾ ಶಾಪ ವಿಮೋಚನೆ, ಗೌತಮ ಉನ್ನತ ಚೇತನನಾಗಿ ಬರುವುದು, ಅಹಲ್ಯೆಯನ್ನು ವಿಶುದ್ಧ ಮಾನಸ್ಸಿನಿಂದ ಸ್ವೀಕರಿಸುವುದು - ಇಷ್ಟೆಲ್ಲ ಘಟನೆಗಳು ಈ ಅಂಕದಲ್ಲಿ ನಡೆಯುತ್ತವೆ. ತಾಮಸಿಕ, ರಾಜಸಿಕ ಪ್ರವೃತ್ತಿಗಳಿಂದ ಮೊದಲಾಗುವ ಪೂರ್ವಾಂಕ, ಸಾತ್ವಿಕ ಪ್ರವೃತ್ತಿಯೊಂದಿಗೆ ಉತ್ತರಾಂಕದಲ್ಲಿ ಕೊನೆಯಾಗುತ್ತದೆ.

ಧರ್ಮ ಸಂಯಮಿತವಲ್ಲದ, ವಾತಾಪಿಯಂತೆ ಬಾಳೊಡೆದು ಬರುವ 'ಕಾಮ'ಕ್ಕೂ ಧರ್ಮ ಸಂಯಮಿತವಾಗಿ, ಜೀವನಶೃತಿಯಾಗಿ ಬರುವ ಪ್ರೇಮಕ್ಕೂ ಇರುವ ಅಂತರವನ್ನು ಗೀತನಾಟಕದ ಚೌಕಟ್ಟಿನೊಳಗೆ, ಪಾತ್ರಗಳ ಮನೋವಿಶ್ಲೇಷಣೆ, ಸನ್ನಿವೇಶ, ಸಂದರ್ಭಗಳ ಸೃಷ್ಟಿ, ಸಂಕೇತಗಳ ಬಳಕೆಯೊಂದಿಗೆ ಅದ್ಭುತವಾದ ರೀತಿಯಲ್ಲಿ ಪು.ತಿ.ನ. ಅವರು ತಮ್ಮ ತಾತ್ವಿಕ ನಿಲುವುಗಳನ್ನು ಬಿಂಬಿಸಿದ್ದಾರೆ. ಕಾವ್ಯ ಪ್ರತಿಭೆ, ಚಿಂತನಶೀಲತೆ, ಜೀವನದರ್ಶನ, ತಂತ್ರಕೌಶಲ್ಯ ಮೊದಲಾದವುಗಳ ಸಮರ್ಥ ಸಂಯೋಜನೆ, ಮೇಳವಿಕೆಗಳೊಂದಿಗೆ, ನಾಟಕವಾಗಿಯೂ ಗೀತ ನಾಟಕವಾಗಿಯೂ ಅನನ್ಯ ಕೃತಿಯಾಗಿಸಿದ್ದಾರೆ. ಗೀತನಾಟಕಗಳಲ್ಲಿ ಗಂಭೀರವಾದ ತಾತ್ವಿಕತೆಗೆ, ಚಿಂತನಗಳಿಗೆ ಅವಕಾಶವಿಲ್ಲ ಎಂದು ಭಾವಿಸುವವರಿಗೆ 'ಅಹಲ್ಯೆ' ಒಂದು ಸವಾಲಿನಂತಿದೆ. ವಸ್ತು ಯಾವುದಾದರೂ ಪು.ತಿ.ನ. ಅವರ ತಾತ್ವಿಕ ದೃಷ್ಟಿ ಒಂದಲ್ಲ ಒಂದು ನೆಲೆಯಲ್ಲಿ ಕೆಲಸ ಮಾಡಿರುತ್ತದೆ. ಇದಕ್ಕೆ ಮೊದಲೇ ವಿವರಿಸಿದ 'ಹರಿಣಾಭಿಸರಣ'ದಲ್ಲಿ ರಾಮ, ಲಕ್ಷ್ಮಣ, ಸೀತೆಯರೂ ಕೂಡ ಮನುಷ್ಯಸಹಜವಾದ ವಿವಿಧ ಭಾವಸ್ತರಗಳಲ್ಲಿ ಸಂಚರಿಸುತ್ತಾ, ಬಯಕೆ ಹಂಬಲ, ಅಳಲು, ಅವಮಾನ, ಕ್ರೋಧ, ಇತ್ಯಾದಿ ಭಾವಗಳಿಗೆ ಸ್ಪಂದಿಸುತ್ತಾ ವಿಧಿ ವಿಧಿಸುವ ಎಡರು ತೊಡರುಗಳಿಗೆ ಪಕ್ಕಾಗುತ್ತಾ ಅನುಭವ ವಿಸ್ತಾರಕ್ಕೆ ಸಲ್ಲುತ್ತಾ, ಬೆಳೆಯುತ್ತ ಗಟ್ಟಿ ಗೊಳ್ಳುವ ಮನಸ್ಸಿನ ಮಾನವರಂತೆ ಕಾಣಿಸುವುದೇ ಪ್ರಮುಖ ಉದ್ದೇಶವಾಗಿದೆ. ಎಡರು ತೊಡರುಗಳು ಎಲ್ಲ ಮಾನವರ ಬದುಕಿನಲ್ಲಿ ಸಹಜವೇ ಆದರೂ, ಬರುವ ಅನುಭವ, ಅನುಷ್ಠ, 'ಸ್ವರ್ಣ ಜಿಂಕೆಯಂತೆ' ಆಮಿಷಾಕಾರವಾಗಿ ಬಂದಾಗ

ಎದುರಾಗುವ ಭೀಕರ ಪರಿಣಾಮಗಳ ಸ್ವರೂಪ ರಾಮ ಲಕ್ಷ್ಮಣಸೀತೆಯರಿಗೊದಗಿದ ಕಷ್ಟ ಪರಂಪರೆಗಳ ಮೂಲಕ ಸ್ಪಷ್ಟ ಪಡಿಸಿದ್ದಾರೆ.

'ಶಬರಿ' ಅದೊಂದು ವ್ಯಕ್ತಿ ಕೇಂದ್ರಿತವಾದ ನಾಟಕ, ಶಬರಿಯ ಮಾತೃವತ್ಸಲತೆ. ಆಕೆಯ ತಪಸ್ಸು, ಪಕ್ವ ಮನಃ ಸ್ಥಿತಿ, ವಿಕಸಿತ ಚೇತನಗಳ ದರ್ಶನ ಮಾಡಿಸುವುದಾಗಿದೆ. ಇದೊಂದು ಸುಂದರ ಭಾವಗೀತಾತ್ಮಕವಾದ ನಾಟಕವಾಗಿದೆ.

## ಕೃಷ್ಣ ಕೇಂದ್ರಿತ ನಾಟಕಗಳಲ್ಲಿ ತಾತ್ವಿಕತೆ

'ರಾಮಾಯಣ'ನಾಟಕ ಸರಣಿಯಲ್ಲಿ ಅಹಲ್ಯೆಯನ್ನು ಹೊರತು ಪಡಿಸಿದರೆ, ಮತ್ಯಾವುದೇ ನಾಟಕದಲ್ಲಿಯೂ ಪ್ರಾಸಂಗಿಕವಾಗಿ ಒಳಿತು ಕೆಡುಕುಗಳ ಬಗ್ಗೆ ಮೌಲ್ಯಗಳ ಬಗ್ಗೆ ಚಿಂತನೆ ನಡೆಸಿದ್ದಾರಾದರೂ, ರಾಮನ ಮಹಾನ್ ವ್ಯಕ್ತಿತ್ವವನ್ನು ಎಷ್ಟೇ ಬೇರೆ ಬೇರೆ ನೆಲೆಗಳಿಂದ ನೋಡಿದರೂ, ಹೊಸ ಹೊಸದಾದ ಮೌಲ್ಯಗಳನ್ನು ಬೆಳಕರಿಸುತ್ತಿರುವಂತೆ ಕಾಣುವುದನ್ನು ವಿಭಿನ್ನ ಕಥಾ ಪ್ರಸಂಗಗಳ ಮೂಲಕ ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ, ರಾಮ, ಕೃಷ್ಣರು ತಾವೇ ಸ್ವತಃ 'ತತ್ವರೂಪರು', 'ದರ್ಶನ'ರೂಪರು, ಸರಿ ಸುಮಾರು ಅವರ ಚಿಂತನಗಳೆಲ್ಲವೂ ಇಂತಹ ಮಹಾನ್ ವ್ಯಕ್ತಿಗಳ, ಮತ್ತು ನಮ್ಮ ಧರ್ಮ, ಶಾಸ್ತ್ರ ಪುರಾಣ ಪರಂಪರೆಯ ಹಿನ್ನೆಲೆಯಿಂದ ಹೊರಡುತ್ತವೆ. ರಾಮ ಕೃಷ್ಣರಂತಹ ಮಹಾನ್ ವ್ಯಕ್ತಿಗಳ ಅವತರಣವಾದ್ದದ್ದೇ ಲೋಕ ಕಲ್ಯಾಣ, ದುಷ್ಟ ಶಿಕ್ಷಣಕ್ಕಾಗಿ. ಅವರಲ್ಲಿನ ಉದಾತ್ತಗುಣಗಳು, ಮನುಕುಲಕ್ಕೇ ಆದರ್ಶ ಪ್ರಾಯವಾದಂತಹವು. ಸದಾ ಕ್ಷೇಮಕಾತರರಾಗಿ ಅಧರ್ಮ ಅನ್ಯಾಯಗಳನ್ನು ಹತ್ತಿಕ್ಕಿ ಭೂಮಿಯಲ್ಲಿ ಉತ್ತಮಿಕೆಯನ್ನು ಬಿತ್ತಿಬೆಳೆಯುವುದೇ ಪರಮೋದ್ದೇಶವಾಗಿ ಉಳ್ಳವರಾದ್ದರಿಂದ ಪು.ತಿ.ನ. ಅವರಿಗೆ ಆ ವ್ಯಕ್ತಿತ್ವಗಳನ್ನು ಕೊಂಡಾಡಲು; ಕಾವ್ಯ, ನಾಟಕ ಮಾಧ್ಯಮವನ್ನು ಆರಿಸಿಕೊಂಡರು, ಅಲ್ಲದೆ ರಾಮಾಯಣ ಮಹಾಭಾರತ, ಭಾಗವತಗಳು ನಮ್ಮ ನಾಡಿನ ಪ್ರಾಚೀನ ಸಂಸ್ಕೃತಿಯ ದ್ಯೋತಕಗಳಾಗಿದ್ದು, ಇವು ಇವರ ಆಧ್ಯಾತ್ಮಿಕ ಆಸಕ್ತಿಯ ತಣಿವಿಗೆ ಪ್ರಮುಖ ಸಾಧನಗಳಾಗಿವೆ. ರಾಮ ಅವನ

ಆದರ್ಶವ್ಯಕ್ತಿತ್ವದಿಂದ ಪ್ರಿಯವೆನಿಸಿದರೆ 'ಕೃಷ್ಣ' ಅವರ 'ಅಂತಃ ಪ್ರಜ್ಞೆಯಾಗಿ' ನಿರಂತರವಾಗಿ ಅವರೊಂದಿಗಿದೆ. ಕೃಷ್ಣನದು ಬಹುಮುಖ ವ್ಯಕ್ತಿತ್ವ ; ಒಂದೊಂದೆಡೆ ಒಂದೊಂದು ರೀತಿಯಲ್ಲಿ ಚಿತ್ರಿತನಾಗಿದ್ದಾನೆ. ಭಾಗವತ, ಭಾರತ, ವಿಷ್ಣುಪುರಾಣ, ಭಗವದ್ಗೀತೆ- ಎಲ್ಲದರಲ್ಲಿಯೂ ಕೃಷ್ಣನ ಒಂದೊಂದು ಮುಖದ ಒಂದೊಂದು ವ್ಯಕ್ತಿತ್ವದ ಪರಿಚಯ ಸಿಗುವುದಾದರೂ, ಇದೆಲ್ಲಕ್ಕೂ ಮೀರಿದ ಮತ್ತು ವೇದಾಗಮ ಶಾಸ್ತ್ರಗಳಿಗೂ ಅಗಮ್ಯವಾದ, ಅಗೋಚರವಾದ, ಯಾರಿಗೂ ಸರಿಯಾದ ಗ್ರಹಿಕೆಗೆ ಬಾರದ ಮತ್ತೂ ಒಂದು ಮುಖವಿದೆ. ರಾಸಲೀಲೆಯಾಡಿ, ಹೆಣ್ಣುಗಳನ್ನು ಛೇಡಿಸುತ್ತಾ, ಕಾಡುತ್ತಾ ತುಂಟಾಟಗಳನ್ನು ಆಡಿ ಗೋಕುಲವನ್ನೇ ಗೋಳಾಡಿಸಿದ ಬಾಲಕೃಷ್ಣ ಒಂದೆಡೆಯಾದರೆ, ಭಾರತದಲ್ಲಿ ರಾಜತಂತ್ರ ನಿಪುಣನಾಗಿದ್ದ, ಕುರುಕ್ಷೇತ್ರ ಸಂಗ್ರಾಮದಲ್ಲಿ ಪಾಂಚ ಜನ್ಯವನ್ನೂದಿದ, ಗೀತೋಪದೇಶದಲ್ಲಿ ಅರ್ಜುನನಿಗೆ, ಕರ್ಮಯೋಗ, ಭಕ್ತಿ ಯೋಗಾದಿಗಳ ಸ್ವರೂಪವನ್ನು ವಿವರಿಸಿ ಕರ್ತವ್ಯ ವಿಮೂಢತ್ವದಿಂದ ಬಿಡಿಸಿದ ಕೃಷ್ಣಮತ್ತೊಂದೆಡೆ. ಪು.ತಿ.ನ. ಅವರಿಗೆ 'ಕೃಷ್ಣನ'ವ್ಯಕ್ತಿತ್ವದ ಯಾವ ಮುಖ ಹಿಡಿಯಬೇಕಿನ್ನುವ ತರ್ಕ ಸಹಜವಾಗಿ ಎದುರಾಗಿರಬೇಕು, ಆದರೆ ಪು.ತಿ.ನ. ಅವರನ್ನು ಸೆರೆಹಿಡಿದದ್ದು ಪ್ರೇಮರೂಪಿ, ರಸರೂಪಿ ಕೃಷ್ಣ. ಭಾಗವತ ಕವಿ ಎಂದೇ ಕರೆಸಿಕೊಂಡ ಪು.ತಿ.ನ. ಒಂದು ರೀತಿಯಲ್ಲಿ ಕೃಷ್ಣವ್ಯಸನಿ. 'ಕೃಷ್ಣ' ಚೈತನ್ಯದ ಬಗ್ಗೆ ಅಪಾರ ಒಲವು. ಯಾವುದೇ ರೀತಿಯಲ್ಲಿ ಕೃಷ್ಣನನ್ನು ಚಿತ್ರಿಸಲು ಹೊರಟರೂ ಪೂರ್ಣ ತಾದಾತ್ಮ್ಯತೆಯೊಂದಿಗೆ ಚಿತ್ರಿಸುತ್ತಾರೆ. ಬಿಡಿ ಕವನಗಳು, ಪ್ರಬಂಧ, ಗೀತನಾಟಕಗಳನ್ನು ಬರೆದರೂ ತಣಿಯದ ಅವರ ಮನಸ್ಸು, 'ಗೋಕುಲ ನಿರ್ಗಮನ ಗೀತನಾಟಕ'ದ ವಿಸ್ತೃತ ರೂಪವೆಂಬಂತೆ ಶ್ರೀಹರಿಚರಿತೆಯನ್ನು ಬರೆದರು. ಕೃಷ್ಣ ಸಂಬಂಧವಾದ ಎಲ್ಲ ಬರಹಗಳ ಹಿಂದೆ ಅವರ ಗಾಢ ಭಕ್ತಿ ಕೆಲಸಮಾಡಿದೆ. 'ಭಕ್ತಿ'ತತ್ವದ ಚಿಂತನೆಯೇ ಈ ಎಲ್ಲಾ ಕೃತಿಗಳಲ್ಲಿ! ಭಾವುಕತೆ, ಭಕ್ತಿ ತನ್ಮಯತೆಗಳೇ ಪ್ರಧಾನ ಅಂಶಗಳು. 'ಕೃಷ್ಣ ತತ್ವ'ದ ಉದ್ಬೋಧನೆಗೆ ಹುಟ್ಟಿಕೊಂಡ ಅನೇಕ ಧಾರ್ಮಿಕ ಪಂಥಗಳಲ್ಲಿ ಭಕ್ತಿ ಪಂಥ ಭಾರತದಾದ್ಯಂತ ಪ್ರಚಲಿತವಾಯಿತು; ರಾಧಾ-ಕೃಷ್ಣರ ಪ್ರೇಮ 'ಜೀವಾತ್ಮ-ಪರಮಾತ್ಮ' ಸಂಬಂಧವನ್ನು ಪ್ರತೀಕಿಸುತ್ತದೆ. ಕೃಷ್ಣನ ಬಾಲಲೀಲೆಗಳು, ಪ್ರಣಯಲೀಲೆಗಳೇ ಕೃಷ್ಣ

ಸಾಹಿತ್ಯದ ಬಹುದೊಡ್ಡ ಭಾಗ. ಇವರಿಬ್ಬರ ಅನನ್ಯ ಪ್ರೀತಿಯ ಮೂಲಕ ಮಧುರ ಭಾವದ ಭಕ್ತಿಯ ಪ್ರಚಾರ. ಉತ್ತರ ದಕ್ಷಿಣ ಭಾರತದಲ್ಲಿ ಗೀತ-ನೃತ್ಯ-ನಾಟಕಗಳ ಹುಟ್ಟಿಗೆ ಕೃಷ್ಣ ಭಕ್ತಿ ದಾರಿ ಮಾಡಿತು.

ಪು.ತಿ.ನ.ರನ್ನು ಸಂತರೆಂದು ಭಾವಿಸದಿದ್ದರೂ ಅವರ ಕೃಷ್ಣಭಕ್ತಿ ತಾದಾತ್ಮ್ಯತೆ, ಆಧ್ಯಾತ್ಮಿಕ ಪರಂಪರೆಯ ನಿಷ್ಠೆಗಳನ್ನು ನೋಡಿದಾಗ, ಯಾವ ಸಂತನಿಗೂ ಕಡಿಮೆಯಿಲ್ಲವೆನಿಸುತ್ತದೆ. ಕೃಷ್ಣನ ಬಗ್ಗೆ ಎಷ್ಟು ರೀತಿಯಲ್ಲಿ ಬರೆದರೂ ತಣಿಯದು. ಕವಿತೆ, ಪ್ರಬಂಧ, ನಾಟಕ, ಮಹಾಕಾವ್ಯ- ಹೀಗೆ ಎಲ್ಲ ಮಾಧ್ಯಮಗಳಲ್ಲೂ ತಮಗಿರುವ 'ಕೃಷ್ಣವ್ಯಸನ'ವನ್ನು ಅಭಿವ್ಯಕ್ತಿಸಿದ್ದಾರೆ. ಕೃಷ್ಣ ಪ್ರೇಮತತ್ವದ ಪ್ರತೀಕವಷ್ಟೇ ಅಲ್ಲ; 'ಸಮಷ್ಠಿತತ್ವ'ವನ್ನೂ ಪ್ರತೀಕಿಸುತ್ತಾನೆ. ಹಾಗಾಗಿ 'ಕೃಷ್ಣನ ಪುನಃ ಸ್ಮೃತಿ ನಮಗೆ ಅಪ್ರಕೃತವಲ್ಲ ಆತನಿಂದ ಉಪದಿಷ್ಟವಾದ ಫಲಪರಿಚಲನ ಯೋಗಕ್ಷೇಮ ಚಕ್ರ ಸಂವಹನ ತತ್ವವೂ ಕೆಲಸಕ್ಕೆ ಬಾರದ ಹಳೆಯ ಸರಕಲ್ಲ' ಎನ್ನುವುದೇ ಅಲ್ಲದೆ ಸಮಷ್ಟಿಯ ಪ್ರತಿನಿಧಿಯಾದ ಕೃಷ್ಣನನ್ನು ಸ್ಮರಣೆಯಲ್ಲಿ ಜೀವಂತವಾಗಿ ಇರಿಸಿಕೊಳ್ಳುವುದು ಲೇಸೆಂದು ಭಾವಿಸುತ್ತಾರೆ. ಆದರೆ ಈಗಿನ ಪೀಳಿಗೆಯ ಜನರಲ್ಲಿ ಆಧ್ಯಾತ್ಮಿಕ ಕೃಪಣತ್ವ ಪ್ರಾಚೀನ ಸಂಸ್ಕೃತಿಯ ಬಗ್ಗೆ ಒಂದು ಬಗೆಯ ನಿರ್ಲಕ್ಷ್ಯವನ್ನು ಕಂಡು ನೊಂದು ಕೊಳ್ಳುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಹರಿಸಾನ್ನಿಧ್ಯವನ್ನು ನಮ್ಮ ನಮ್ಮ ಪರಿಸರಗಳಲ್ಲಿ ಕಲ್ಪಿಸುವುದು ಆಗತ್ಯವೆಂದು ಭಾವಿಸುತ್ತಾರೆ, ಯಾಕೆಂದರೆ ಹರಿಸಾನ್ನಿಧ್ಯ ಇದ್ದೆಡೆ ಸಮಾಧಾನ. ಸಂತೋಷ ಪ್ರೀತಿ, ಗೆಲುವು, ಮೈತ್ರೀ ಭಾವಗಳು ತಮಗೆ ತಾವೇ ನೆಲಸಿರುತ್ತವೆ; ನೋವು ಕಾರ್ಪಣ್ಯಗಳಿಗೆ ಎಡೆಯೇ ಇರುವುದಿಲ್ಲ. ಹೀಗೆ 'ಕೃಷ್ಣ' ಚಿಂತನೆ ಪು.ತಿ.ನ. ಅವರ ಬದುಕಿನಲ್ಲಿ ಸರ್ವ ವ್ಯಾಪಿಯಾಗಿರುವಾಗ, 'ಶ್ರೀಹರಿಚರಿತೆ' ಗಿಂತಲೂ ಕಾವ್ಯ ಮೌಲ್ಯದ ದೃಷ್ಟಿಯಿಂದ ಒಂದು ತೂಕ ಹೆಚ್ಚಾಗಿಯೇ ಇರುವ 'ಕೃಷ್ಣ' ಕೇಂದ್ರಿತ ಗೀತನಾಟಕ ಸುಮಾರು 40ರ ದಶಕದಲ್ಲಿಯೇ ರಚಿತವಾದದ್ದು ಅಚ್ಚರಿಯಲ್ಲ.

12ನೇ ಶತಮಾದ 'ಗೀತಗೋವಿಂದ'ದಿಂದ ಆರಂಭವಾದ ಕೃಷ್ಣ ಕಾವ್ಯ ಪರಂಪರೆ 16ನೇ ಶತಮಾನದಲ್ಲಿ ಮತ್ತಷ್ಟು ಪ್ರಚಲಿತವಾಗಿ, ಉತ್ತರ

ದಕ್ಷಿಣ ಭಾರತದಲ್ಲಿ ಗೀತ-ನೃತ್ಯ-ನಾಟಕಗಳಿಗೆ ದಾರಿಮಾಡಿತು. 'ಶೃಂಗಾರ ಮಹಾಕಾವ್ಯ'ವೆಂದು ಲೋಕ ಪ್ರಸಿದ್ಧವಾದ ಗೀತಗೋವಿಂದವೇ ಕೃಷ್ಣಕಥಾನಕವುಳ್ಳ ಗೀತ-ನೃತ್ಯ-ನಾಟಕ ಕಾವ್ಯಾದಿಗಳಿಗೆ ಮೂಲ ಮಾತೃಕೆಯಾಯಿತು. ಅಲ್ಲಿಂದ ಮುಂದೆ 'ಗೀತಕಾವ್ಯ'ದ ದೀರ್ಘ ಪರಂಪರೆಯೊಂದು ಹುಟ್ಟಿಕೊಂಡಿತು. ಈ 'ಗೀತಗೋವಿಂದ' ಗೀತನಾಟಕ, ಪು.ತಿ.ನ. ಅವರನ್ನು ಪ್ರಭಾವಿಸಿರುವ ಸಾಧ್ಯತೆಯಿದೆ. ಆದರೆ ಸ್ವರೂಪ, ಸಂವಿಧಾನಗಳ ದೃಷ್ಟಿಯಿಂದ ಮತ್ತು ತಾತ್ವಿಕತೆಯ ದೃಷ್ಟಿಯಿಂದ ಪು.ತಿ.ನ.ಅವರ ಗೋಕುಲ ನಿರ್ಗಮನ ಇನ್ನೂ ಒಂದು ಹೆಜ್ಜೆ ಮುಂದಿದೆ. ಗೀತಗೋವಿಂದದಲ್ಲಿನ ನಾಟಕೀಯ ಅಂಶಗಳ ಕೊರತೆಯನ್ನು ಇಲ್ಲಿ ನಿವಾರಿಸಿ ಕೊಂಡಿದ್ದಾರೆ. 'ಗೋಕುಲ ನಿರ್ಗಮನ'ದಲ್ಲಿನ ತಾತ್ವಿಕತೆ ರಾಧಾ-ಕೃಷ್ಣರ ಅನನ್ಯ ಪ್ರೇಮದ ಹಿನ್ನೆಲೆಯಲ್ಲಿಯೇ ಗುರುತಿಸಬೇಕಾಗುತ್ತದೆ. ಪ್ರೇಮವೇ ಇಲ್ಲಿನ ಪ್ರಧಾನ ತಾತ್ವಿಕತೆ. ಕೃಷ್ಣ ಗೋಪಿಯರ ಪ್ರೇಮ, ರಾಧಾಕೃಷ್ಣರ ಪ್ರೇಮ, ಕೃಷ್ಣ-ಗೋಕುಲವಾಸಿಗಳ ಪ್ರೇಮ-ಹೀಗೆ ಪ್ರೇಮ ಸಂಬಂಧಗಳಿದ್ದರೂ 'ಪ್ರೇಮ'ದ ರೀತಿಗಳು, 'ಪ್ರೇಮ'ದ ಸ್ವರೂಪ ಬೇರೆ ಬೇರೆ. 'ಪ್ರೇಮ' ಚಿಂತನೆಯ ಜೊತೆ ಜೊತೆಗೆ 'ರಸ' ಚಿಂತನೆಯೂ ನಡೆಯುತ್ತದೆ.

ಬಹುರೂಪಿ ವ್ಯಕ್ತಿತ್ವದ ಚಿದಾನಂದ ಸ್ವರೂಪನಾದ, ಸುಂದರ ಮಂಗಳನಾದ, ಅವತಾರೀ ಪುರುಷನಾದ 'ಕೃಷ್ಣ'ನ ಬದುಕನ್ನು ಆಧ್ಯಾತ್ಮ ಅನುಭಾವದ ಬೆಳಕಿನಲ್ಲಿ ನೋಡಿ ಸೆರೆಹಿಡಿವ ಪ್ರಯತ್ನದಲ್ಲಿ, ಅವನ ಜೀವನದ ಎಲ್ಲ ಪ್ರಮುಖ ಸನ್ನಿವೇಶ, ಸಂದರ್ಭಗಳ ಕಡೆ ಗಮನ ಹರಿಸಿದರೂ, ಗೋಕುಲವಾಸಿ ಗೋಪಾಲಕ, ಕೃಷ್ಣ ಗೋಪ-ಗೋಪಿಯರ ಜೊತೆಗೆ ಒಡನಾಡುತ್ತಾ ಅವರೆಲ್ಲರನ್ನೂ ಆನಂದಾನುಭೂತಿಗೆ ಒಡ್ಡುತ್ತಾ ತನ್ನ ಕೈ ಕೊಳಲನಾದ ಮಾಧುರ್ಯಗಳಿಂದ ತಣಿಸಿ, ತನ್ಮಯರನ್ನಾಗಿಸುತ್ತಾ ಬಗೆಬಗೆಯ ಭಾವರಸದ ಕಡಲುಗಳನ್ನು ಉಕ್ಕಿಸುತ್ತಾ ದಿನ ಕಳೆಯುತ್ತಿದ್ದವನು, ಅಕ್ರೂರನ ಆದೇಶದಂತೆ, ಕಂಸನ ಕರೆಯನ್ನು ಮನ್ನಿಸಿ ಮಧುರೆಗೆ ಹೋಗ ಬೇಕಾದ ಸನ್ನಿವೇಶ ಒದಗಿದಾಗ, ಅನಿವಾರ್ಯತೆಯಿಂದ ಕೊಳಲು ಬಿಸುಟು ಹೊರಡುತ್ತಾನೆ. ಹೊರಡುವಾಗಿನ ಈ ಸಂಕೀರ್ಣ ಸನ್ನಿವೇಶ ಪು.ತಿ.ನ.ರ ಅದ್ಭುತ ಕಲ್ಪನೆಯಾಗಿದೆ. ಗೋಕುಲದ ನಂದಕುಮಾರ

ಕೊಳಲು ವಿಸರ್ಜಿಸಿ ಹೊರಟು ವಾಸುದೇವ ಸ್ಥಿತಿಗೆ ಏರುತ್ತಾನೆ. ಇನ್ನೆಂದೂ ಅವನ ಕೈಯ್ಯಲ್ಲಿ ಕೊಳಲು ಸಾಧ್ಯವಾಗದೆ, 'ಪಾಂಚಜನ್ಯ'ವೇ ಅವನ ಮುಂದಿನ ಬದುಕಿನ ಅಲಂಕರಣವಾಗುತ್ತದೆ. 'ವೇಣುವಿಸರ್ಜನ' ಸನ್ನಿವೇಶವಂತೂ ದುಃಖ, ವಿಷಾದ, ಶಂಕೆ, ನಿರಾಸೆ, ನಿರ್ಲಿಪ್ತತೆ ಇತ್ಯಾದಿಗಳ ಭಾವ ಸಂಗಮದಿಂದ ಅನನ್ಯವಾಗಿದೆ.

ಪು.ತಿ.ನ. ಅವರ ದೃಷ್ಟಿಯಲ್ಲಿ ರಾಧಾ-ಕೃಷ್ಣರು ಅನನ್ಯ ಪ್ರೇಮದ ದೈವೀ ದಂಪತಿಗಳು. ರಾಧಾ-ಕೃಷ್ಣರಷ್ಟೇ ಅವರೊಂದಿಗೆ ಅನನ್ಯವಾಗಿ ಬೆಸೆದು ಕೊಂಡಿರುವ ಮತ್ತೊಂದು ವಸ್ತು 'ವೇಣು' ಅಥವಾ ಕೊಳಲು. ಈ ಕೊಳಲು ನಿರ್ಜೀವವಲ್ಲ, ಕೃಷ್ಣನ ಚಿದಂಶ, ಅಂಥಾದ್ದರಲ್ಲಿ, ಕೃಷ್ಣ ಎಷ್ಟೇ ಮಹಾನ್ ಆದರೂ ವಿಧಿಯ ಕ್ರೌರ್ಯ, ಕೃಷ್ಣ, ರಾಧೆ-ವೇಣು- ಮೂರನ್ನೂ ಬೇರ್ಪಡಿಸಿ ಅವರ ಬದುಕುಗಳನ್ನೇ ಬಿರುಗಾಳಿಗೆ ಒಡ್ಡುತ್ತದೆ.

ಸೂಕ್ಷ್ಮ ಸಂವೇದನಾಶೀಲ ಮನಸ್ಸಿಗೆ ಯಃಕಶ್ಚಿತ್ ಗೊಲ್ಲ ನೊಬ್ಬನ ಕೊಳಲದನಿ ಇಂತಹ ಮಹತ್ಕಾವ್ಯ ನಾಟಕ ಸೃಷ್ಟಿಗೆ ಪ್ರೇರಣೆಯಾಯಿತೆಂಬುದು ಒಂದು ನೆಲೆಯ ವಾಸ್ತವಿಕಸತ್ಯ. ಕೊಳಲು ಕೇವಲ ಬಾಹ್ಯ ಪ್ರೇರಣೆ, ಪ್ರಬಲವಾದ ಪ್ರೇರಣೆ ಪ್ರಚೋದನೆ ದೊರೆತದ್ದು ಒಳಗಿನ ಭಾವ-ತುಡಿತಗಳಿಂದ ಅವರಲ್ಲಿ ಅಖಂಡವಾಗಿ ಸುಪ್ತವಾಗಿ ನೆಲೆಸಿರುವ ಸೌಂದರ್ಯ ಪ್ರಜ್ಞೆ, ರಸಪ್ರಜ್ಞೆ, ಆಧ್ಯಾತ್ಮಿಕ ಪ್ರಜ್ಞೆ- ಎಲ್ಲವೂ ಮುಪ್ಪುರಿಗೊಂಡು 'ಗೋಕುಲ ನಿರ್ಗಮನ'ದ ಅವತರಣಕ್ಕೆ ಕೆಲಸಮಾಡಿದೆ. ಇದರ ಜೊತೆಗೆ ಅವರೇ "ನಾನು ಕೇಳಿದ ಹಲವಾರು ಸಂಗೀತಗಳ ಸುಖ, ನೋಡಿದ ನೃತ್ಯಾಭಿನಯಗಳ ಸೊಗಸು, ಮನನ ಮಾಡಿದ ಕಾವ್ಯಗಳ ರಸರುಚಿ ಮತ್ತು ಇವುಗಳೆಲ್ಲದರಲ್ಲೂ ಪಟ್ಟ ಒಂದು ತೆರದ ಅತೃಪ್ತಿ, ಹಲವಾರು ಛಂದಸ್ಸುಗಳು ನನ್ನ ಮನಸ್ಸನ್ನು ತೂಗುಯ್ಯಾಲೆಯಾಡಿಸಿದ ಬಗೆ, ನನ್ನ ಹೃದಯಕ್ಕೆ ಅತಿ ಸಮೀಪವಾಗಿ ಸ್ನೇಹದಂತಿರುವ ಅಲೌಕಿಕ ವಿಷಾದ, ಅದರ ಸುತ್ತಿನ ಹಂಬಲುಗಳು, ಹೀಗೆ ನಾನು ಜಾಗ್ರತ, ಸ್ವಪ್ನಾವಸ್ಥೆಗಳಲ್ಲಿ ಪಟ್ಟ ನೂರಾರು ತೀವ್ರಾನುಭೂತಿಗಳು ನನ್ನಲ್ಲಿಯೇ ಮುಗಿಯುವುದೆಂತು?" ಎಂದು ಪ್ರಶ್ನಿಸಿಕೊಂಡು ಪ್ರಜ್ಞಾಪೂರ್ವಕವಾದ ಪ್ರೇರಣೆಗಳೇನೆಂಬುದನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ, ಈ 'ಕೃತಿ' ಅವರಿಗೆ ಅನಿವಾರ್ಯ

'ಅಭಿವ್ಯಕ್ತಿ'ಯಾಗಿದೆ. ಇದರ ಹಿಂದೆ ಗಂಭೀರವಾದ ತಾತ್ವಿಕ ಚಿಂತನೆ ಇದೆಯೆಂಬುದು ಅವರ ಮಾತುಗಳಿಂದ 'ಸ್ಪಷ್ಟ', ರಸರೂಪೀ, ಪ್ರೇಮರೂಪೀ ಕೃಷ್ಣನ ಕೊಳಲನಾದ ಕಿವಿಗಷ್ಟೇ ಇಂಪಲ್ಲ: ಭವದ ಜಂಜಡಗಳಿಂದ ಭೀತಮನಸ್ಸುಗಳಿಗೆ ಸಾಂತ್ವನವಾಗಿ, ಅಭಯವಾಗಿ ಪರಿಣಮಿಸಿದೆ. ಕೊಳಲುಲಿಗೆ, ಅದೂ ಬೆಳ್ದಿಂಗಳ ಪರಿಸರದಲ್ಲಿ ಎಂತಹ ಮೋಹಕ ಶಕ್ತಿ, ಮಾಂತ್ರಿಕ ಶಕ್ತಿ ಇದೆಯೆಂದರೆ, ಗೋಕುಲದ ಗೋಪ-ಗೋಪಿಯರೆಲ್ಲರೂ ತಮ್ಮ ಲೌಕಿಕ ತಾಪತ್ರಯಗಳನ್ನು ಮರೆತು.

"ಎನ್ನದು ತನ್ನದು
ಇದು ಸರಿತಪ್ಪು
ಇಲ್ಲದಾಯ್ತು ಕೊಳಲುಲಿವೇ ನೆಪ್ಪು
ಸಂಸಾರದೂರ ಬಿನದವೇ ನೇರ"

-ಎಂಬ ಸ್ಥಿತಿಗೆ ಸಂದು ಅವರವರ ಗುಣ, ಸ್ವಭಾವ, ಮನೋಧರ್ಮಗಳಿಗನುಗುಣವಾಗಿ, ಒಂದೇ ಕೊಳಲುಲಿಯಾದರೂ ಭಿನ್ನ ಭಿನ್ನ ಭಾವ ಪ್ರಚೋದನೆಗೆ ಒಳಗಾಗಿದ್ದರೆ. "ಪಟವದಾರ ತುಯ್ಯುವೊಲು" ಎಲ್ಲರೂ ಯಾವುದೋ ಅನಿವಾರ್ಯದಾಕರ್ಷಣೆಗೆ ಒಳಗಾದಂತೆ, ಮುರಳೀ ಮಾಯೆಯಲ್ಲಿ ಗಂಡ, ಮಕ್ಕಳು, ಹಿರಿಯರು, ಕುಪ್ಪಸ, ಹರಳೋಲೆ, ಪಿಲ್ಲಿ ಇತ್ಯಾದಿಯಾಗಿ ನೆಲದ ಸಂಬಂಧಗಳನ್ನು ಮರೆತು ಸ್ವೇಚ್ಛೆ ಸ್ವೈರತೆಯಿಂದ, ಸಮಾಜ ಭೀತಿಯನ್ನೂ ಧಿಕ್ಕರಿಸಿ ಸಿಲುಕಿಕೊಂಡಿದ್ದಾರೆ. ಮರ್ಯಾದೆಯ ಎಲ್ಲೆಕಟ್ಟುಗಳನ್ನು ಮೀರಿ ಉನ್ಮತ್ತ ನರ್ತನ ಮಗ್ನರಾದ ಮಕ್ಕಳನ್ನೆಳೆದೊಯ್ಯಲು ರೌದ್ರಾವೇಶಗಳಿಂದ ಧಾವಿಸಿ ಬಂದ ಹಿರಿಯರೆಲ್ಲರೂ, ಕ್ರಮೇಣ ಸೆಳೆಯಲ್ಪಡುತ್ತಾರೆ. ಮೊದಲಿಗೆ ಅವರೆಲ್ಲರ ಮುರಳೀಪಾರವಶ್ಯತೆ ಹುಚ್ಚೆನ್ನಿಸಿದರೂ, ಆ ಹುಚ್ಚಿಗೇ ಮರುಳಾಗಿ ನಿಲ್ಲುತ್ತಾರೆ.

ಮುಗ್ಧ ಗೋಕುಲವನ್ನೇ ಸೆರೆಹಿಡಿದ ಮುರಳೀನಾದ ನಾಗರೀಕ ಪರಿಸರದ ಅಕ್ರೂರನನ್ನೂ ಆಕರ್ಷಿಸುತ್ತದೆ, ತನ್ನ ನಾಗರೀಕ ಬುದ್ಧಿಗೂ ಗೋವಳನ ಕೊಳಲುಲಿ ಮೆಚ್ಚುಗೆಯಾದದ್ದು ಅವನಿಗೇ ಆಶ್ಚರ್ಯ ವೆನಿಸುತ್ತದೆ, ನಾಗರೀಕ, ಸಂಕುಚಿತ ಪರಿಸರಕ್ಕೆ ಮುದುಡಿದ್ದ ಮನಸ್ಸು ಉಲ್ಲಾಸ, ಸಂಭ್ರಮಗಳಿಂದ ಅರಳಿ ನಿಲ್ಲುತ್ತದೆ.

ಸೃಷ್ಟಿಯ ಸುಸ್ವನಗಳೆಲ್ಲವೂ ಕೊಳಲಲ್ಲಿ ಸೆರೆಗೊಂಡಿದ್ದು, ಬಿಡುಗಡೆ ಗೊಂಡಂತಿರುವ ನಾದತರಂಗಗಳು, ಸೃಷ್ಟಿಯ ಚೆಲುವೇ ಗಾನರೂಪದಲ್ಲಿ ಆತ್ಮಕ್ಕೆ ಎಟುಕಿಸಿ ಕ್ಷಣ ಕ್ಷಣಕ್ಕೂ ಹೊಸಭಾವಗಳನ್ನು ಸ್ಫುರಿಸಿ, ಆವರಣವನ್ನೇ ಮಧುರ ಸ್ನಿಗ್ಧ ಗೊಳಿಸಿದ, ಕೊಳಲ ನುಡಿಸುವ ಗೋಪಾಲನೆಂತಿರುವ ನೆಂಬ ಕುತೂಹಲ, ಅಕ್ರೂರನನ್ನು, ಅಮೂರ್ತಗಾನದೊಡಲಿಂದ ಮೂರ್ತ ಕೃಷ್ಣ ಕಲ್ಪನೆಗೆ ಹೊರಡಲು ಪ್ರಚೋದಿಸುತ್ತದೆ.

ಅಮೂರ್ತಗಾನವಷ್ಟೇ ಅನುಭವಕ್ಕೆ ಬರುತ್ತಿದೆ. 'ಅಮೂರ್ತಗಾನ'ದ ಸೃಷ್ಟಿಕರ್ತ ಕೃಷ್ಣನು, ಅರಸಿಯೂ ಕಾಣದೆ ಹೋದಾಗ, ಗೋಕುಲವಾಸಿಗಳಲ್ಲಿ ಕಾಣಿಸಿಕೊಂಡ ಕಳವಳ, ಕಂಡಾಗ ಅವರು ತೋರಿದ ಸಂತೋಷ, ಸಂಭ್ರಮ, ಗೆಲುವುಗಳು, ಅಕ್ರೂರನಿಗೆ ವ್ಯಕ್ತಿ ಸಂಬಂಧಗಳ ಗಾಢತೆಯ ಅರಿವನ್ನು ಮನದಟ್ಟು ಮಾಡಿಸುತ್ತದೆ.

ಗೋಕುಲವನ್ನು ತ್ಯಜಿಸುವ ಹಿಂದಿನ ರಾತ್ರಿ! ಆ ಒಂದು ರಾತ್ರಿ ತುಂಬು ಉತ್ಸಾಹದಿಂದ, ಅನನ್ಯಭಾವದಿಂದ ನುಡಿಸುವ ಕೊಳಲು ಅವನುಸಿರ ಸ್ಪರ್ಷಮಾತ್ರದಿಂದ ಅವನೆದೆ ಭಾವಗಳೆಲ್ಲವನ್ನೂ ನಾದವಾಗಿ ಹೊಮ್ಮಿಸಿ ಅನಿರ್ವಚನೀಯವಾದ ಆನಂದಾನುಭೂತಿ ಸ್ಥಿತಿಗೆ ಜಗತ್ತನ್ನೇತಂದು ನಿಲ್ಲಿಸಿದೆ. ಬಲರಾಮನಿಗೆ 'ಮೂಲೋಕವಗೆಲೆ' ಇಷ್ಟೇ ಸಾಕೆನಿಸುತ್ತದೆ. ಆದರೆ ಇದಿಷ್ಟೇ ಕೃಷ್ಣನ ಪ್ರಬಲ ಅಸ್ತ್ರವಲ್ಲ. ಎಷ್ಟೊಂದು ಹಗೆಗಳನ್ನು ಕೃಷ್ಣನು ಕೊಂದಿದ್ದಾನೆ, ಈಗ ನೋಡಿದರೆ ಗೋಕುಲದಲ್ಲಿ ಪ್ರೀತಿಯ, ಆಪ್ತತೆಯ, ಸ್ನೇಹದ ಮಹಾಪೂರವನ್ನೇ ಉಕ್ಕಿಸಿದ್ದಾನೆ, ಎಲ್ಲವೂ ನೆನಪಾದಾಗ ಕೃಷ್ಣನಿಗೆ ಒಲುಮೆ-ಹಗೆಗಳ ದ್ವಂದ್ವದ ಬಗ್ಗೆ ಚಿಂತಿಸುವಂತಾಗುತ್ತದೆ, ಸ್ನೇಹಿತರಿಗೂ ಪ್ರೀತಿಸುವವರಿಗೂ ಹಗೆಗಳು ಹುಟ್ಟಿಕೊಳ್ಳುವುದೇಕೆ ? ಅಕಾರಣ ದ್ವೇಷಾಸೂಯೆಗಳು ತೊಳೆಯುವುದೇಕೆ? -ಎಂಬ ಪ್ರಶ್ನೆ ಸೋಜಿಗವೆನಿಸಿ ನಂತರ ಅದೇ ವಿಷಾದಕ್ಕೆ ದಾರಿಮಾಡುತ್ತದೆ. ಸಾಮಾನ್ಯ ಮಾನವರಂತೆಯೇ ಭಾವುಕತೆಯ ನೆಲೆಯಿಂದ ಒಲುಮೆ-ಹಗೆಗಳ ಸಂಬಂಧವನ್ನು ಲೋಕದಲ್ಲಿ, ಸೃಷ್ಟಿಯಲ್ಲಿ, ಹೂವು-ಮುಳ್ಳು, ಮೋಡ-ಮಿಂಚು-ಗುಡುಗು, ನಗೆ-ಹುಬ್ಬಿನ ಸೆಡಕು, ಇತ್ಯಾದಿ ಸಂಬಂಧಗಳ ಮೂಲಕ ಅರಿಯಲು, ಅರ್ಥೈಸಿಕೊಳ್ಳಲು

ಪ್ರಯತ್ನಿಸುತ್ತಾನೆ. ಮೂಲಭೂತವಾಗಿ ಸೃಷ್ಟಿ ಸ್ವಭಾವದಲ್ಲಿ ವಿರುದ್ಧ ಸ್ಥಿತಿಗಳು ಅಪರಿಹಾರ್ಯವೆಂಬ ತಾತ್ವಿಕ ಅರಿವನ್ನು ತಲುಪಿದಾಗಲೇ ಅವನ ವಿಷಾದಕ್ಕೆ ತೆರೆ ಬೀಳುತ್ತದೆ, ಒಲುಮೆ-ಹಗೆಗಳು ಒಂದೇ ಪ್ರೀತಿಯ ಎರಡು ರೀತಿ; ಒಂದು ನಾಣ್ಯದ ಎರಡು ಮುಖ, ಇದು ಅನಿವಾರ್ಯವೆನ್ನುವುದು ಕೃಷ್ಣನಿಗಾದ ಅರಿವಷ್ಟೇ ಅಲ್ಲ; ಪು.ತಿ.ನ. ರ ಗ್ರಹಿಕೆಯೂ ಕೂಡಾ!

ಅಕ್ರೂರನಿಗೆ ಕೃಷ್ಣನ ಅತಿಮಾನವ ವ್ಯಕ್ತಿತ್ವದ ಅನುಭವ ದರ್ಶನಗಳಾಗುತ್ತಿದ್ದಂತೆ ಭಕ್ತಿ ಗೌರವಗಳು ಇಮ್ಮಡಿಸುತ್ತವೆ. ಇಂತಹ ಮಹಾನ್ ವ್ಯಕ್ತಿತ್ವದ ಕೃಷ್ಣ ಗೋಕುಲದ ಜೊತೆ ಸಾಮಾನ್ಯರಂತೆ ಬೆಸೆದು ಕೊಂಡಿರುವುದು, ಅವರ ನಡುವೆ ಬೇರು ಬಿಟ್ಟ ಗಾಢ ಸಂಬಂಧಗಳು, ಕೃಷ್ಣನು ಮಧುರೆಗೆ ಬರುವ ಭರವಸೆಯನ್ನು ಸಡಿಲಿಸುತ್ತದೆ.

ಮಧುರೆ, ಬಿಲ್ಲಹಬ್ಬ, ಅಲ್ಲಿನ ಸಂಭ್ರಮ, ಸೌಂದರ್ಯಗಳು ಮುಗ್ಧ ಗೋಕುಲದ ಯುವಕರನ್ನು, ಬಲರಾಮನನ್ನು ಸೆಳೆಯಬಹುದೇ ಹೊರತು, ಕೃಷ್ಣನನ್ನು ಸೆಳೆಯಲಾರದು. ಅಲ್ಲದೆ ಆಗರ್ಭ ಶತ್ರುವಾದ ಕಂಸನಿಂದ ಬಂದ ಆಹ್ವಾನ, ಹೊರನಾಡಿನ ಕರೆ ಎಂದರೆ ಕೇಡಿನಕರೆ 'ಎಂಬುದು ಹಿಂದಿನ ಅನುಭವಗಳಿಂದ ಬಲ್ಲ. ಪೂತನಿಯ ರೂಪದಲ್ಲಿ, ಶಕಟಾಸುರನ ರೂಪದಲ್ಲಿ ಮತ್ತು ಇನ್ನೆಷ್ಟೋ ರೀತಿಯಲ್ಲಿ ಬಂತು. ಆದರೆ ನಿಂತೆಡೆಗೇ ಕೇಡುಗಳು ಬಂದಾಗ, ಗೋಕುಲವನ್ನು ರಕ್ಷಿಸಿಕೊಳ್ಳ ಬೇಕಾದುದು ಧರ್ಮ, ಈಗ ಮಧುರೆಗೆ ಹೋಗುವುದೆಂದರೆ ಕೇಡುಗಳನ್ನು ಅರಸಿಕೊಂಡು ನಾವೇ ಹೊರಟಂತೆ!' -ಎಂಬುದು ಕೃಷ್ಣನ ತರ್ಕ. ಗೋಪಿಯರಿಗೂ ನಗರ ಸಂಸ್ಕೃತಿಯ ಆಮಿಷದ ಹಿಂದಿನ ಪರಿಣಾಮಗಳ ಅರಿವಿದೆ ಖಂಡಿತವಾಗಿಯೂ ಕೃಷ್ಣ ಗೋಪರು ಒಮ್ಮೆ ಅದರ ಮೋಹಕ್ಕೆ ಬಿದ್ದರೆಂದರೆ ಮರಳುವುದಿಲ್ಲವೆಂಬುದು ಖಾತ್ರಿಯಾಗಿದೆ. ಅವರ ಭಯ, ಆತಂಕ ತಮ್ಮೆಲ್ಲರಿಗೂ ಅಭಯವಾಗಿದ್ದ, ಚಿದಾನಂದ ರೂಪನಾಗಿದ್ದ ಭವದ ಮಾಯೆ, ಅಹಂಕಾರಗಳನ್ನು ದೂರ ಮಾಡುವ, ಕ್ಲೇಶಗಳನ್ನೂ ನಿವಾರಿಸುವ ಚೇತನವಾಗಿದ್ದವನು, ಈಗ ಹೊಳೆ, ಬನ, ಹೂ, ಹಕ್ಕಿ ಸೊಬಗು ಬೆಳುದಿಂಗಳ ಸೊಗ-ಎಲ್ಲದರಿಂದಲೂ ತಮ್ಮನ್ನು ವಂಚಿಸುತ್ತಿದ್ದಾನೆ.

ಮಧುರೆಯ ಹೆಣ್ಣುಗಳ ಸೆಳೆತ ನಲುಮೆ ಕೂಟ ಕುಣಿತ ಮುಂತಾದ
ಸೆಳೆತಗಳು ಮೊಸಳೆಯಂತೆ ನುಂಗುವಾಗ ತಮ್ಮ ನೆನಪಾದರೂ ಎಲ್ಲಿಬರಲು
ಸಾಧ್ಯ ? -ಎನಿಸಿಯೇ ಹೋಗಬೇಡವೆಂದು ಯಾಚಿಸುತ್ತಾರೆ.

ಕೃಷ್ಣ ಪಾರಮ್ಯವನ್ನು ಎಷ್ಟು ಕೊಂಡಾಡಿದರೂ ತಣಿಯದ
ಪು.ತಿ.ನ. ಮನಸ್ಸಿಗೆ ಒಂದು ಕೃತಿಯಲ್ಲಿ ಸಂವಿಧಾನ, ಕಥಾನುಗುಣವಾಗಿ
ಎಷ್ಟು ಸ್ತುತಿಸಬೇಕೆನ್ನುವುದು ಮುಖ್ಯವಾಗದೆ ಅವನಲ್ಲಿನ 'ಶಿವಾಂಶ'
ತೀವ್ರಾನುಭೂತಿಯ ಕ್ಷಣಗಳಲ್ಲಿ ವಿಶ್ವವ್ಯಾಪಕ ರೂಪವಾಗಿ ಬಿತ್ತರಗೊಳ್ಳು
ತ್ತದೆ. ಭೂಮ ಚಿತ್ರವೊಂದನ್ನು ಅದ್ಭುತ ಪ್ರತಿಮೆಗಳೊಂದಿಗೆ ನೀಡುತ್ತಾರೆ.

ಆತ್ಮರಸದ ರುಚಿಯಂತೆ, ಬಯಕೆಯ ಮರದ ಫಲದಂತೆ ಇರುವ
ರಾಧೆ ತನ್ನ ವಶವಾಗಲು ಆನಂದೋತ್ಕರ್ಷ ಸ್ಥಿತಿಗೇರಿದ ಕೃಷ್ಣನಿಗೆ ಜಗದ
ಸೊಗವೇ ತನ್ನೆಡೆಗೆ ಹರಿದು ಬಂದಂತಾಗಿ, ಒತ್ತಿ ಬರುವ ಮುದವನ್ನು ಕುಣಿ
ಕುಣಿದು, ಜಗದಾನಂದವನ್ನು ತನ್ನಲ್ಲಿ ತುಂಬಿಕೊಂಡ, ಮತ್ತೆ ಅದನ್ನೇ
ಭೂಮಿಯೆಲ್ಲಾ ವ್ಯಾಪಿಸುವಂತೆ ಉಕ್ಕಿಸುವ ಮಾಧ್ಯಮವಾಗಿ,
ವ್ಯಕ್ತಿಮಿತಿಯನ್ನು ಮೀರತ್ತಾ, ಅಮೂರ್ತ ಆನಂದವನ್ನು ಮೂರ್ತವಾಗಿ
ಹರಿಸುವ ಮಹಾಪಾತ್ರವಾಗುತ್ತ, ತನ್ನಲ್ಲಿನ 'ಶಿವಾಂಶ'ಈ ತೀವ್ರಾನುಭೂತಿ
ಕ್ಷಣದಲ್ಲಿ ಹೀಗೆ ವ್ಯಕ್ತವಾಗಿಸುತ್ತದೆ:-

"ಹರುಷದೊಳುಬ್ಬುತ ಹಬ್ಬಿರುವೆನ್ನಯ
ಜಟೆಯೆನೆ ಮರದೊಳು ಚಂದ್ರನು ತಂಗಿರೆ
ಗಿರಿಜೆಯಂತೆ ನೀ ಬಳಿಯೊಳೆ ನಿಂದಿರೆ
ಶಿವನ ಸುಮ್ಮಾನ ವಾಗಿದೆ ನನಗೆ"

(ಗೋ.ನಿ.ಪು-40)

ರಾಧಾ-ಕೃಷ್ಣರು ಕೇವಲ ಮಾನವರಲ್ಲ: ಆನಂದ ಚೇತನರು
ವಿಶ್ವಾನಂದದ ಮಹಾಪೂರದೊಳಗೆ ತಾವೇ ಜಗವಾಗಿ ಜಗವೇ ತಾವಾಗಿ
ವಿಶ್ವಾನಂದದೊಂದಿಗೆ ತಾದಾತ್ಮ್ಯತೆಯನ್ನು ಪಡೆಯುತ್ತಾರೆ.

ಪು.ತಿ.ನ. ಚಿಂತನೆಯಲ್ಲಿ ರಾಧಾ-ಕೃಷ್ಣರು ಜೀವಾತ್ಮ ಪರಮಾತ್ಮರ
ಅದ್ವೈತ ಅಭಿವ್ಯಕ್ತಿರೂಪರು, ಅವರಿಬ್ಬರ ಸಂಯೋಗ ಸಂಮಿಲನಗಳು

ವಿಶ್ವಾನಂದವಾಗಿ ಪರಿಸಮಾಪ್ತಿಯಾಗುತ್ತದೆ. ಅವರ 'ಆನಂದ'ದಲ್ಲಿ ಜಗತ್ತಿನ ಸಮಸ್ತ ಸೃಷ್ಟಿಯೂ ಲೀನವಾಗಿದೆ. ಕವಿಗೆ ಈ ಸ್ಥಿತಿಯಲ್ಲಿ ಸೃಷ್ಟಿಯಲ್ಲಿನ ಮರಂಗಳು ಪೂರೆಯೇರಿದ ಸಿದ್ಧರಂತೆ, ಜನಂಗಳು ಕೊಳಲಿ ದುಮ್ಮಿಕ್ಕಿದ ಸರಂಗಳಂತೆ ಕಾಣುತ್ತದೆ. ಇವುಗಳ ಜೊತೆಗೂಡಿದ ಬೃಂದಾವನ, ನಂದನವನ, ನಂದನಮಗ, ಇಂದ್ರ, ಪರಶಿವ, ಹರಿ-ಪರಸ್ಪರ ಭೇದವರಿಯದೆ ಆನಂದರಾಸದಲ್ಲಿ ಭಾಗಿಯಾಗುತ್ತಾರೆ. ಅವರೆಲ್ಲ ಕೊಳಲು ಧುಮ್ಮಿಕ್ಕಿದ ಸರಂಗಳೆಂಬ ರೂಪಕ ಕಲ್ಪನೆ ಕವಿಯ ಅದ್ಭುತ ಕಲ್ಪನೆಗೆ ಸಾಕ್ಷಿಯಾಗಿದೆ. 'ವಿಶ್ವರೂಪಿ'ಯಾಗಿ ಅವನು, ಕಾಣಿಸಿಕೊಂಡದ್ದನ್ನು,

"ಸಾಸಿರ ಕಣ್ ಸಾಸಿರ ತಲೆ ಸಾಸಿರ ಪಾದ
ಬಾಳ್ ಬಾಳಿಗು ಹಬ್ಬುತ್ತಿಹುದಿವನ ಹಸಾದ
ಇವನಿಚ್ಚೆಯ ಹೃದಯವ ಹೊಕ್ಕಿವನವನೆನದೆ
ಇವನಂಗವೆ ನಾವೆನೆ ರಾಸಕೆ ಸೆಳೆಯುತ್ತಿದೆ"

(ಗೋ.ನಿ.ಪು-47)

-ಹೀಗೊಂದು ಭೂಮ ಪ್ರತಿಮೆಯ ಮೂಲಕ ವಿವರಿಸಿದ್ದಾರೆ.

ಪ್ರಕೃತಿ ವಿಚಿತ್ರದಂತೆ, ಸೃಷ್ಟಿಯಲ್ಲಿನ ಸಮಸ್ತ ಭಾವ ಭಿನ್ನತೆ ಕರಗಿಹೋಗಿ, ಹೊಸಹುಟ್ಟು ಪಡೆದಂತಾಗಿ, ಈ ಆನಂದವೇ ಬ್ರಹ್ಮಾನಂದವಾಗಿ, ನಲವೇ ಕೊನೆಯೆಂಬ ನಂಬುಗೆಯಿಂದ ತಪಕೆ ನಿಲುಗಡೆ ನುಡಿದು, ಬಿಡುಗಡೆಯ ಮಹಾನಂದ ಭಾವವನ್ನು ತುಂಬಿಕೊಂಡು ಮರಳುತ್ತಾರೆ.

ಇಂತಹ ಆನಂದೋತ್ಕರ್ಷ ಸ್ಥಿತಿ ರಾಧಾ ಸಂಯೋಗದಿಂದ ಮಾತ್ರ ಸಾಧ್ಯ ಕೃಷ್ಣನ ಅಸ್ತಿತ್ವದ ಅವಿಚ್ಛಿನ್ನ ಭಾಗವಾಗಿ ಇರುವ 'ರಾಧೆ'ಯ ಕ್ಷಣದಗಲಿಕೆಯೂ ಅವನೆಲ್ಲ ಆನಂದವನ್ನು ಬತ್ತಿಸಿಬಿಡುತ್ತದೆ. ಜಗತ್ತೇ ಅಂಗಲಾಚಿದರೂ ಕೊಳಲ ಮೌನ ಮುರಿಯುವುದಿಲ್ಲ. ಕೃಷ್ಣನ ಮೊಗದಲ್ಲಿ ಗೆಲುವು ಅರಳುವುದಿಲ್ಲ. ಅವಳಿಲ್ಲದಿದ್ದಲ್ಲಿ,

"ಮುದವು ಮನದಿ ತೀರಿತ್ತಂತು ನಾನಾವರಾಗ
ಕುಕಿಲಕೊಡಲಿ ರಾಧಾನೇತ್ರ ಸುಸ್ನೇಹ ದೂರಂ

ಎಲರು ತಿರೆಯ ಬಿಟ್ಟಂತಿಂದು ನಕ್ಷತ್ರಗೂಡು
ತ್ತಿರುಳ ತೊರೆವ ವೋಲೆನ್ನಾತ್ಮವುಂ ಭಾವಶೂನ್ಯಂ"
(ಗೋ.ನಿ.ಪು-57)

-ಎಂದು ತನ್ನ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾನೆ ಗೋಕುಲದವರ ದೃಷ್ಟಿಯಲ್ಲಿ 'ಕೃಷ್ಣ' ನಂತಹವನಿಗೂ 'ರಾಧಾಮೋಹ'ದ ನೆರಳು ಕವಿದದ್ದು ವಿಚಿತ್ರವೆನಿಸಿ, ಆ ನೆರಳು ಕವಿಯದಿರಲೆಂದು ಪ್ರಾರ್ಥಿಸುತ್ತಾರೆ.

ಕೃಷ್ಣನ ಈ ವಿಷಾದ, ಇನ್ನು ಮುಂದಿನ ಬಾಳಿನ ಸ್ಥಾಯಿ ಸ್ಥಿತಿಯಾಗುತ್ತದೆ. ತನ್ನಿಚ್ಛೆಗೆ ವಿರುದ್ಧವಾಗಿ, ಗೆಳೆಯರ ಅದಮ್ಯ ಉತ್ಸಾಹ, ಸಂಭ್ರಮ, ಹಿರಿಯರ ಒತ್ತಾಯ ಅಕ್ರೂರನ ಪ್ರೀತಿ, ಭಕ್ತಿ, ಗೌರವದ ಆತ್ಮೀಯ ಆಹ್ವಾನಗಳು ಅವನಲ್ಲಿ ಸಂದಿಗ್ಧ ಸ್ಥಿತಿಯನ್ನುಂಟು ಮಾಡುತ್ತದೆ. ಕೃಷ್ಣನ ಮೌನ ಬಲರಾಮನ ಅಸಮಾಧಾನಕ್ಕೆ ದಾರಿಯಾಗಿ, ಕೊಳಲೇ ಇವನ ಈ ನಿಲುವಿಗೆ ಕಾರಣವೆನಿಸಿ, ಅವನಿಂದ ಅದನ್ನು ಕಿತ್ತೆಸೆಯುತ್ತಾನೆ. ಈ ಸಂಕೀರ್ಣ ಸನ್ನಿವೇಶ 'ಗೋಕುಲ ನಿರ್ಗಮನ' ಗೀತನಾಟಕಕ್ಕೆ ಒಂದು ಮಹತ್ವದ 'ಧ್ವನಿ' ಪೂರ್ಣತೆಯನ್ನು ಒದಗಿಸಿದೆ. "ಭಾವವಂಶವೇ ಕೊನೆಗೊಂಡಿತು ಎನೆ ಘಾತವಾಯಿತೀ ವಂಶದ ಪಾತ" ಎಂಬ ಅಕ್ರೂರನ ಉದ್ಗಾರವೂ ಧ್ವನಿಪೂರ್ಣವಾಗಿ ಪರಿಣಮಿಸಿದೆ. ಕೊಳಲು ಎಲ್ಲ ಬಗೆಯ ಭಾವರಾಗಗಳ ಸಂಜನಕ; ಸಂವಾದಕ, ಅದರ ಪಾತವೆಂದರೆ ಭಾವವಂಶಕ್ಕೇ ಘಾತವಾದಂತೆ. ಕೊಳಲು ಗೋಕುಲದವರ ಆನಂದಮೂಲ, ಅದರನಾದ ಮಾಧುರ್ಯದಲ್ಲಿ ಕೃಷ್ಣನ ಆನಂದ, ಶುಭ ಹಾರೈಕೆಗಳು ಅಭಯ ಭಾವ, ಚೈತನ್ಯವಡಗಿರುವುದರಿಂದ, ಅದಿಲ್ಲವಾದಲ್ಲಿ ಅವೆಲ್ಲಕ್ಕೂ ನಿಲುಗಡೆ. ಕೃಷ್ಣನಿಗೆ 'ಕೊಳಲ ಬೀಳು' ತನ್ನಂಗವೊಂದನ್ನು ; ಚಿವುಟಿತೆಗೆದಂತೆ, ತನ್ನಿರವಿನ ಒಂದಂಶವೇ ತನ್ನನ್ನು ಬಿಟ್ಟಂತೆ, ನೋವಿಗೆ ಕಾರಣವಾಗುತ್ತದೆ. 'ವಂಶಪಾತ'ಕ್ಕೆ ನೆತ್ತರಿಡುತ್ತದೆ.

ಮತ್ತೆ ಅದನ್ನು ಎತ್ತಿಕೊಳ್ಳಲು ಬಲವಂತ ಮಾಡಿದರೂ, ಮಧುರೆಗೆ ಹೊರಟಿರುವಾಗ, ನಗರದ ವರ್ಣಮಯ ಆಕರ್ಷಣೆಯ ಹೆಬ್ಬಲೆಯೊಳಗೆ ಸಿಲುಕಿರುವಾಗ, "ಹೊಳಲಿಗೆ ಕೊಳಲಿದು ತರವಲ್ಲ

ಮಧುರೆಗಿದರ ಸವಿಸಲ್ಲ"- ಎಂದು ಹೇಳಿ ನಿರಾಕರಿಸಿ ಬಿಡುತ್ತಾನೆ.

ನಿಸರ್ಗ ಪರಿಸರದಲ್ಲಿ ಬೆಳೆದು ಆಡಿದ ಕೃಷ್ಣನೂ ಕೂಡ ನಿಸರ್ಗದ ಭಾಗವಾಗಿದ್ದಾನೆ. ಪ್ರಕೃತಿ ಜಡವಲ್ಲ, ಚೈತನ್ಯ ಪೂರ್ಣ ತನ್ನ ಬದುಕಿನಲ್ಲಿ ಆನಂದವನ್ನು ತುಂಬಲು ಸಹಕರಿಸಿದ ಬನದೇವಿ, ಯಮುನೆ, ಎಲರು, ಹಕ್ಕಿ, ಚಂದ್ರತಾರೆಗಳು-ಎಲ್ಲರಿಂದಲೂ ಬೀಳ್ಕೊಳ್ಳುವ, ತನ್ನ ಭಾವಾಂಶ, ಚಿದಾಂಶವಾದ 'ಕೊಳಲ'ಹೊಣೆಯನ್ನು ಒಪ್ಪಿಸಬೇಕಾದ ಅನಿವಾರ್ಯತೆ ಅವನಿಗಿದೆ.

ಬದುಕುಗಳಲ್ಲಿ 'ವಿಧಿ'ಯ ಪಾತ್ರ ದೊಡ್ಡದು. ಅದು ನಮ್ಮೆಲ್ಲರ ನಂಬಿಕೆಯಂತೆ ಕೃಷ್ಣನೂ 'ವಿಧಿ'ಯನ್ನು ವಿನಮ್ರತೆಯಿಂದಲೂ, ವಿವಶತೆಯಿಂದಲೂ ಒಪ್ಪಿಕೊಳ್ಳುತ್ತಾನೆ.

"ಬಹೆನೋ ಬಾರನೋ ಬಲ್ಲೇನೇ ವಿಧಿ<br>
ಯಿತ್ತುದೊಲ್ಲೆನೆಂದೆಂಬೆನೇ<br>
ಹಳವೋ ಹೊಳಲೋ ಹರಿ ಕರೆವೆಡೆಗೋಗೊಡು<br>
ತಡಿ ಮುಂದಿಡದೆಯ ಹಿಂದೆಗೆವೆ ನಾ"

(ಗೋಕುಲ ನಿರ್ಗಮನ)

ಎನ್ನುವಲ್ಲಿ 'ವಿಧಿ' ಮುಂದಿನ ತನ್ನ ಅಸಹಾಯಕತೆ ಭವಿಷ್ಯದ ಅನಿರ್ದಿಷ್ಟತೆಗಳು ಅಡಗಿರುವುದರ ಜೊತೆಗೆ ಗೋಕುಲದ ದೈವದಂತಿರುವ ಇವನೂ ದೈವ ಪ್ರೇರಣೆಯಂತೆ ನಡೆಯ ಬೇಕಾಗಿದೆ. ಎನ್ನುವುದು 'ದೈವ'ವನ್ನೂ ಮೀರಿದ 'ಶಕ್ತಿ'ಯೊಂದರ ಅಸ್ತಿತ್ವದ ಸೂಚನೆ ದೊರೆಯುತ್ತದೆ. ಮಧುರೆಗೆ ಹೋಗಬೇಕಾದ ಅನಿವಾರ್ಯತೆಯಿಂದ, ದೀರ್ಘಕಾಲದಿಂದ ಬೆಸೆದುಕೊಂಡಿದ್ದ ಗೋಕುಲದ ಪರಿಸರವನ್ನೇ ಪರಕೀಯ ವಾಗಿಸಿದೆ. 'ಮರಳಿಬಾರೆ'ನೆಂಬ ಅಂತರಾತ್ಮದ ನುಡಿ ಅಲ್ಲಿಯವರೆಗೂ ಮಧುರ ಸ್ಮೃತಿಗಳನ್ನು ಸೃಷ್ಟಿಸಿದ ಆ ಪರಿಸರದ ಜೊತೆಗೆ ಮತ್ತಷ್ಟು ನಿರ್ಲಿಪ್ತವಾಗುವಂತೆ ಮಾಡುತ್ತದೆ. ತನ್ನ ಸಾಮರ್ಥ್ಯಕ್ಕೆ ಮೀರಿದ 'ವಿಧಿ'ಯ ಆದೇಶದೆದುರು ವೈಯಕ್ತಿಕವಾದ ಆಸೆ, ಹಂಬಲಗಳಿಗೆ ಎಡೆಯಿಲ್ಲವೆಂಬ ಕಟುಸತ್ಯದಿಂದಾಗಿ ಪರಿಸ್ಥಿತಿಯೊಂದಿಗೆ ಒಪ್ಪಂದ ಮಾಡಿಕೊಳ್ಳ ಬೇಕಾಗುತ್ತದೆ ಆದರೆ ಗೋಕುಲದವರ ಅಳಲು ಹೆಪ್ಪುಗಟ್ಟಿದೆ.

ಕೃಷ್ಣನ 'ಅಸ್ತಿತ್ವವೇ' ಗೋಕುಲದ ಬದುಕಿನ ಉಸಿರು. ಅವನಿಲ್ಲದ, ಅವನ ಸಾನ್ನಿಧ್ಯ ದೊರೆಯದ, ಅವನ ಕೊಳಲ ಇನಿದನಿ ಕೇಳದ ಬದುಕು ಅರ್ಥಹೀನ ; ಜಗತ್ತಿನ ಆನಂದ, ಉಲ್ಲಾಸ, ಹರ್ಷಗಳು ಬರಡಾದಂತೆ; ಕೃಷ್ಣ ಪ್ರೀತಿಯ ರಕ್ಷಾ ಕವಚವಿಲ್ಲದೆ, ಭವ, ಭೀತಿಗೆ, ಮುಪ್ಪು ಸಾವಿಗೆತೆರೆದು ಕೊಂಡವರು. 'ಮರಳಿಬರುವೆ' "ನ್ಯಾಸವಿಟ್ಟು ಮುರಳಿಯಾಣೆ ಮತ್ತೆ ಬರುವೆ"ಎಂಬ ಮಾತುಗಳು ಹುಸಿ ಭರವಸೆಗಳೆಂಬುದು ಅವರಿಗೂ ಗೊತ್ತು; ಅವನಿಗೂ ಗೊತ್ತು, ಅವನನ್ನು ತಡೆವ ಪ್ರಯತ್ನಗಳಿಗೆ ಅರ್ಥ ವಿಲ್ಲವಾಗುತ್ತದೆ. ಕೃಷ್ಣನ ಅಸ್ತಿತ್ವದ ಅನನ್ಯಭಾಗವಾದ ರಾಧೆಗೆ ಕೃಷ್ಣನ ನಿರ್ಧಾರಗಳ ಸ್ವರೂಪದ ಅರಿವಿದೆ. "ಒಲಿದಡೆ ಒಲಿದೇ ಒಲಿವನವ," ಉಳಿದೊಡೆ ಉಳಿದೇ ಉಳಿವನವ ; ತೊರೆದಡೆ ತೊರೆದೇ ತೊರೆವನವ" - ಎಂಬುದು ಅವಳಿಗೆ ಖಾತ್ರಿ.

ರಾಧೆಗೆ ಕೊಳಲು ಕೃಷ್ಣ ಪ್ರತೀಕವಾಗುತ್ತದೆ. ಅದರಪ್ಪುಗೆ, ಸಾನ್ನಿಧ್ಯಗಳೇ ಕೃಷ್ಣ ಸಾಂತ್ವನವಾಗುತ್ತದೆ. ಅವಳ ದೃಷ್ಟಿಯಲ್ಲಿ ಕೊಳಲು ಸಾಮಾನ್ಯವಾದ್ದಲ್ಲ "ಯಮುನೆಯ ಬನದಲಿ ಒಲುಮೆ ಗುಟ್ಟನ್ನು ಉಸಿರಿದ ದಿನದಿನದ ರೂಢಿಯ ಮೊಟ್ಟೆಯೊಡೆದು, ಹೃದಯಕ್ಕೆ ಕಾವು ಕೊಟ್ಟು, ಹಕ್ಕಿ ಮಾಡಿ, ರೆಕ್ಕೆ ಬಿಡಿಸಿ ಹಾರಾಡ ಕಲಿಸಿದ, ಮನ ದೊಳಗಾಸೆಯ ಪಂಜ ಹೊತ್ತಿಸಿ, ಮನದನ್ನನಿವನೆಂದು ತೋರಿದ ಮತ್ತು ಅವನ ಸಂಗಮದ ಅರೆಕ್ಷಣದ ಆಮೋದದ ತೇಜದಿಂದ ಜಗತ್ತೆಲ್ಲವನ್ನೂ ಹೊಗರಿಸಿದ ಕೊಳಲು, ಲಘು ಗುರುವೆನ್ನದೆ ಏಕ ಪ್ರಕಾರವಾಗಿ ಜಗವನ್ನೇ ಮತ್ತೇರಿಸಿರಿದ ಮಾಂತ್ರಿಕ ಕೊಳಲು. ಆದರೂ ಇಂದು ಅದಕ್ಕೆ ಒದಗಿದ ಸ್ಥಿತಿಯೂ ತನ್ನಂತಹುದೇ ಎಂಬ ಪ್ರಜ್ಞೆಯರಿವಿನಿಂದಾಗಿ ರಾಧೆಯ ಮನಸ್ಸಿಗೆ ಸ್ವಲ್ಪ ಸಮಾಧಾನ. 'ಕಾಡಿನ ಬಿದಿರು,' 'ಹುಲುಕಡ್ಡಿ'ಯಾಗಿಯೂ ಅದರ ಚಾತುರ್ಯದಿಂದ ಕೃಷ್ಣನನ್ನು ನಾದಮಯನ್ನಾಗಿ ಮಾಡಿ, ವಿಶ್ವಾನಂದದ ಹುಚ್ಚು ಹೊಳೆ ಹರಿಸಿ, ಸೃಷ್ಟಿ ಸರ್ವಸ್ವ ವೆಲ್ಲವನ್ನು ಕೊಚ್ಚಿದ ಕೊಳಲು, ಕೃಷ್ಣನ ಉಸಿರ ಸ್ಪರ್ಷವಂಚಿತವಾಗಿ ಈಗ ಕೇವಲ ಬಿದಿರಾಗಿದೆ; ಅಮೃತ ಚೆಲ್ಲಿ ಬರಿದಾದ ಕಳಶದಂತಿದೆ; ಮಹಿಮಾರಹಿತವಾಗಿ ಬಿದ್ದಿದೆ. ಇಂತಹ ಸ್ಥಿತಿಯಲ್ಲಿನ ಕೊಳಲು, ಇದೇ ಸ್ಥಿತಿಯಲ್ಲಿರುವ ರಾಧೆಯೊಂದಿಗೆ ಮಾತ್ರ ಸ್ಪಂದಿಸಬಲ್ಲುದು.

ಅತ್ಯಂತ ಸಂವೇದನಾಶೀಲವಾದ ಪು.ತಿ.ನ. ಮನಸ್ಸಿಗೆ ಕೃಷ್ಣ ತೊರೆದು ಹೋದ ಗೋಕುಲದ ಸ್ಥಿತಿಯು ಗಮನಕ್ಕೆ ಬರುತ್ತಿದ್ದಂತೆ, ಭಾರತದ ನೆನಪಾಗುತ್ತದೆ. 'ರಸಬತ್ತಿದ ಸ್ಥಿತಿ'ಯ ನಿವಾರಣೆಗೆ ಗೊಲ್ಲತಿಯ ಭಾವತಳೆದು ಕೃಷ್ಣನ ಪುನರಾಗಮಾಸಕ್ಕೆ ಪ್ರಾರ್ಥಿಸುವಂತೆ 'ದೈವ ಜಾಗರ'ದೊಂದಿಗೆ ಭಾರತದಲ್ಲಿಯೂ ರಸಸ್ಥಿತಿ ಉಂಟಾಗಲೆಂದು ಹಾರೈಸುತ್ತಾರೆ.

ಯಾವುದೇ ಚಿಂತನೆಯಲ್ಲಿದ್ದರೂ ನಾಡು, ಸಂಸ್ಕೃತಿ ಅವರ ಚಿಂತನೆ, ಆಲೋಚನೆಗಳ ಅಂತರ್ಗತ ಭಾಗವಾಗಿರುತ್ತದೆ.

ಈ ಗೀತನಾಟಕದ ಒಂದು ವಿಶೇಷವೆಂದರೆ, ಕನಸಿನಲ್ಲಿ ಅರಳಿದ ಕಥಾಚಿತ್ರ ಕನಸು ಹರಿವುದರೊಂದಿಗೆ, ಜಾಗ್ರತ ಪ್ರಜ್ಞೆಯ ಆಕ್ರಮಣದೊಂದಿಗೆ, ಕೊಳಲು ಮಧುರನಾದವಾಗಿ ಇಷ್ಟೆಲ್ಲಾ ಭಾವ ರಸಗಳನ್ನು ಪ್ರಚೋದಿಸಿದ್ದು, ಈಗ ಕರ್ಕಶವೆನಿಸುತ್ತದೆ; ನಿದ್ರಾಭಂಗಕ್ಕೆ ದಾರಿ ಎನಿಸುತ್ತದೆ. ನಾಟಕತಂತ್ರದ ದೃಷ್ಟಿಯಿಂದ ಈ ಕನಸು ಬಹು ಮುಖ್ಯವೆನಿಸುತ್ತದೆ.

ಪು.ತಿ.ನ. ಅವರ ಗೀತನಾಟಕ ಪರಂಪರೆಯಲ್ಲಿ ಇದೊಂದು ಅವರ ಅದ್ಭುತ 'ಕಲಾಸೃಷ್ಟಿ' ಇಡೀ ನಾಟಕವೇ ಒಂದು 'ಭವ್ಯ ರಸಸೌಧ' ಉತ್ಕೃಷ್ಟ ಭಾವ ಮೌಲ್ಯದ 'ಮಹಾಗೀತ ಕಾವ್ಯ,' ತೀಕ್ಷ್ಣವಾದ, ಭಾವಸ್ಪರ್ಷಿ ಸನ್ನಿವೇಶಗಳಿಂದಲೂ, ರಸ-ಭಾವಗಳ ಸುಂದರ, ಸೂಕ್ಷ್ಮ ನಿರೂಪಣೆ ಯಿಂದಲೂ, ಅದ್ಭುತ ಪ್ರತಿಮೆ, ಪ್ರತೀಕ, ಚಿತ್ರ ನಿರ್ಮಾಣದಿಂದಲೂ, ವೈವಿಧ್ಯಮಯ ಛಂದೋಲಯಗಳಿಂದಲೂ ಭಾವೋದ್ದೀಪಕ ರಾಗಗಳ ಸಮರ್ಥ ಸಂಯೋಜನೆಯಿಂದಲೂ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಅನನ್ಯ ಸೃಷ್ಟಿಯಾಗಿದೆ. ವಿಮರ್ಶಕರೊಬ್ಬರು ಇದನ್ನು ಭಾವಗೀತ ಗೊಂಚಲುಗಳಿಂದ ಕೂಡಿದ 'ಮಹಾಭಾವಗೀತ' ವೆಂದಿರುವುದರಲ್ಲಿ ಆಶ್ಚರ್ಯವಿಲ್ಲ.

ಪು.ತಿ.ನ. ಅವರೇ ವಿವರಿಸುವಂತೆ ಈ ಗೀತನಾಟಕದಲ್ಲಿ 'ಭಾವನಾಂಶ-ಚಿಂತನಾಂಶ' ಗಳ ಸಮರ್ಥ ಸಂಯೋಗವಾಗಿದೆ. ರಾಧಾ-ಕೃಷ್ಣ-ಗೋಪಿಕೆಯರ ವಿಶುದ್ಧ ಪ್ರೇಮದ ಹಿನ್ನೆಲೆಯಲ್ಲಿ ದೈವ, ವಿಧಿ, ಭಾವ,

ರಸ, ಸಂಸ್ಕೃತಿಗಳ ಸಾಂದರ್ಭಿಕ ಚಿಂತನೆ ನಡೆದಿದೆ. 'ತಾತ್ವಿಕತೆ' 'ಚಿಂತನೆ' ಎಂಬ ಪರಿಕಲ್ಪನೆಗಳನ್ನು ಪು.ತಿ.ನ. ಅವರ ಗೀತನಾಟಕಗಳಲ್ಲಿ ಪ್ರತ್ಯೇಕವಾಗಿ ಹುಡುಕ ಹೊರಡುವುದು ಸರಿಯಲ್ಲ. ಭಾವ ಪದರಗಳ ಒಳಗೆ ಗಂಭೀರ ತಾತ್ವಿಕ ಚಿಂತನೆಗಳ ಪುರುಳು, ಸೂಕ್ಷ್ಮ ಅವಲೋಕನದಿಂದ ಮಾತ್ರ ಗ್ರಹಿಕೆಗೆ ಸಾಧ್ಯವಾಗುತ್ತದೆ.

## ಕುಚೇಲ-ಕೃಷ್ಣ

ಕೃಷ್ಣ ಕೇಂದ್ರಿತ ಗೀತನಾಟಕಗಳ ಸಾಲಿನಲ್ಲಿ ಬಂದ ಮತ್ತೊಂದು ಗೀತನಾಟಕ, ತೀರ ಇತ್ತೀಚೆಗೆ, 1997ರಲ್ಲಿ ಪ್ರಕಟವಾದ ಪು.ತಿ.ನ. ಅವರ ಸಮಗ್ರಗೇಯ ನಾಟಕಗಳು ಸಂಪುಟದಲ್ಲಿರುವ 'ಕುಚೇಲ ಕೃಷ್ಣ'. ಬಹಳ ಹಿಂದಿನಿಂದಲೇ 'ಕುಚೇಲ ಕೃಷ್ಣ' ಗೀತನಾಟಕ ಚಿಂತನೆ ನಡೆಯುತ್ತಿದ್ದರೂ, ಪ್ರಕಟವಾದದ್ದು ಮಾತ್ರ 1997ರಲ್ಲಿ. 'ಗೋಕುಲ ನಿರ್ಗಮನ' ಮಧುರ ಭಕ್ತಿಯ ಹಿನ್ನೆಲೆಯಲ್ಲಿ ರಾಧಾ-ಕೃಷ್ಣ-ಗೋಪಿಯರ ವಿಶುದ್ಧ ಪ್ರೇಮದ ಸ್ವರೂಪ ಚಿಂತನೆ, ಅವರ ನಡುವಿನ ಗಾಢ ಸಂಬಂಧ, ಗೋಕುಲಕ್ಕೆ ದೈವವೂ ಆನಂದರೂಪಿಯೂ, ಭರವಸೆಯೂ ಆದ 'ಕೃಷ್ಣ'ನ ಚಿತ್ರ, ಅವನಲ್ಲಿ ಅಂತರ್ನಿಹಿತವಾಗಿದ್ದ ವಿಶ್ವರೂಪಕತ್ವ, ಸರ್ವವ್ಯಾಪಕತ್ವಗಳ ವಿವರಣೆ ಇದ್ದರೆ, ಇಲ್ಲಿ 'ಕೃಷ್ಣ-ಕುಚೇಲ'ರ ನಡುವಿನ 'ಸ್ನೇಹ'ಸ್ವರೂಪದ ಚಿಂತನೆಯಿದೆ. ಕುಚೇಲ-ಕೃಷ್ಣ ಪಾತ್ರಗಳು ಮುಖಾ ಮುಖಿಯಾದರೂ, ಕುಚೇಲ, ಕೃಷ್ಣನ ಸ್ನೇಹ ಪ್ರೀತಿ, ಔದಾರ್ಯಗಳ ಅಭಿವ್ಯಕ್ತಿಗೆ ನೆಪವಾಗುತ್ತಾನೆ. ನಮ್ಮ ಭಾರತೀಯ ಪರಂಪರೆಯಲ್ಲಿ ಕೃಷ್ಣ-ಕುಚೇಲೋಪಾಖ್ಯನ ಅತ್ಯಂತ ಜನಪ್ರಿಯವೂ, ಜನಜನಿತವೂ ಆಗಿದೆ, ಕೃಷ್ಣ-ಕುಚೇಲರ ಸಂಬಂಧ ಕೇವಲ ಸ್ನೇಹ ಸಂಬಂಧ ವಷ್ಟೇ ಅಲ್ಲ; ರಾಧಾ-ಕೃಷ್ಣ-ಗೋಪಿಕೆಯರ ನಡುವಿನ ಪ್ರೇಮ ಸಂಬಂಧ, ಭಗವಂತ-ಭಕ್ತನ ನಡುವಿನ ಸಂಬಂಧದಲ್ಲಿ ಮಧುರಭಾವದ ಭಕ್ತಿ ಇದ್ದಂತೆ, ಕುಚೇಲ ಕೃಷ್ಣರ ನಡುವೆಯೂ ಭಕ್ತ-ಭಗವಂತ ಸಂಬಂಧವಿದೆ. ಇಲ್ಲಿ ಭಕ್ತಿ ತನ್ಮಯತೆಯೊಂದಿಗಿನ ಆರಾಧನಾ ಭಾವವೇ ಮುಖ್ಯವಾಗಿದೆ. ಪು.ತಿ.ನ.ರ ಭಾಗವತ ಮನಸ್ಸಿಗೆ, ಕೃಷ್ಣ ಭಕ್ತಿ ಅಭಿವ್ಯಕ್ತಿಗೆ ಕುಚೇಲ ಕೇವಲ ನಿಮಿತ್ತ. ಆದ್ದರಿಂದಲೇ ಕೃಷ್ಣನ ಪ್ರಸ್ತಾಪ ಬಂದಾಗಲೆಲ್ಲ ಮನದುಂಬಿ, ಮೈದುಂಬಿ

ಕೃಷ್ಣ ಭಕ್ತಿಯ ಮಹಾಪೂರವೇ ಹರಿದು ಬರುತ್ತದೆ. ಕತೆಯ ಅಂಶ ಇಲ್ಲವೇ ಇಲ್ಲ ವೆನ್ನುವಷ್ಟು ತೆಳು. ಕುಚೇಲನ ಬಡತನದ ದಾರುಣತೆ, ಮಡದಿಯ ಅಸಹಾಯಕತೆ, ಅವನ ಆತ್ಮಗೌರವ ಇವೆಲ್ಲವೂ ಸಂಭಾಷಣಾ ಗೀತೆಗಳ ಮೂಲಕ ಸಮರ್ಪಕವಾಗಿ ಚಿತ್ರಿಸಿದ್ದರೆ. ದಟ್ಟ ದಾರಿದ್ರ್ಯದಲ್ಲಿ ನರಳುವ ಕುಟುಂಬದಲ್ಲಿ ಅನ್ನ, ಬಟ್ಟೆಗೆ ಕೊರತೆಯಿದ್ದರೂ, ಕುಚೇಲನಂತಹ ಹರಿಭಕ್ತನಿಗೆ ಕೃಷ್ಣ ಪ್ರೀತಿ, ನಾಮಸ್ಮರಣೆಯ ಹೊರತು ಬೇರೆಯಾವ ಕಾಳಜಿಯೂ ಇಲ್ಲ. ಅವನಿಗೆ ಕಣ್ಣಿನಾಚೆಗಿನ ಭಕ್ತಿ ಪ್ರಪಂಚ ಮುಖ್ಯವಾಗತ್ತದೆಯೇ ಹೊರತು ವೈಯಕ್ತಿಕ ಜೀವನ, ಕುಟುಂಬ ಜೀವನ ಚಿಂತೆಯೇ ಇಲ್ಲ.

ಆರ್ಥಿಕ ಮುಗ್ಗಟ್ಟು ಕ್ಷಣ ಕ್ಷಣಕ್ಕೂಎದುರಾಗುತ್ತ ಕುಚೇಲನ ಮಡದಿ ಕಾಂತಿಮತಿ ಅಧೀರಳಾದರೆ, ಕುಚೇಲನಿಗೆ

"ಹುಲ್ಲ ಜೋಪಡಿ ಕೈಯ ದುಡಿಮೆ
ಸಾಕು ಹೊಟ್ಟೆಗೆ ಬಟ್ಟೆಗೆ
ಏನು ಬೇಕಾ ಮತ್ತೆ ನಮಗೆ
ಹಗೆಯಿರದ ದಗೆಯಿರದ ಬಗೆಯೊಳು
ನಾವಿರಲು ನಮ್ಮೊಟ್ಟಿಗೆ"

-(ಸಮಗ್ರ ಗೇಯ ನಾಟಕಗಳು-ಪು.288)

-ಎನ್ನುವ ಸಂತೃಪ್ತಿ, ಹರಿನಾಮದಿಂದ ಹಸಿದ ಹೊಟ್ಟೆ ತುಂಬುವುದಿಲ್ಲ; ಬದುಕಿನ ಆಗತ್ಯಗಳು ಪೂರೈಕೆಯಾಗುವುದಿಲ್ಲ.

"ತೆರವಾಗಿದೆ ನಿಮ್ಮ ಹೃದಯ
ಹರಿಯ ತುಂಬಿ ಕೊಂಡಿರೆ
ತೆರವಿಲ್ಲವು ನನ್ನದಿನಿಯ
ಕರೆದಾತನ ಕೂರಿಸೆ"

"ಹರಿ ಹರಿ ಎನೆ ನೀರವಹುದೆ ಸೋರುತಿರುವ ಗುಡಿಸಲು
ಹರಿಹರಿ ಎನೆ ತಣಿಯುವುದೇ
ಹಸಿದಿರುವಾ ಮಕ್ಕಳು."

-(ಸ-ಗೇ-ನಾ. ಪು-289)

ಎನ್ನುವ ಅವಳ ವಾದ ತರ್ಕಗಳು ನಿಷ್ಠುರವೆನಿಸಿದರೂ, ಪರಿಸ್ಥಿತಿಯ ಬಗೆಗಿನ ಕಠೋರ ಸತ್ಯ ಅದಾಗಿದೆ. ಕೃಷ್ಣ ಮಿತ್ರನಾಗಿಯೂ ಇಂತಹ ದರಿದ್ರಸ್ಥಿತಿಗೆ ಲೋಕವೂ ನಗುತ್ತದೆ; ಸಹಾನುಭೂತಿ ತೋರುವುದಿಲ್ಲ. "ನೋಡಿ ಈಕೃಷ್ಣಮಿತ್ರ, ಚಂದಿಮಾಮನೆಂದು ಮಂದಿ? ಆಡಿಕೊಂಡು ನಗುವರು! -ಕಾಂತಿಮತಿಯ ಈ ತರ್ಕ ನೋವಿನ ತೀವ್ರತೆಯನ್ನು ಮನದಟ್ಟುಮಾಡಿಕೊಡುತ್ತದೆ. ಕೃಷ್ಣನ ನೆರವನ್ನು ಯಾಚಿಸಬೇಕೆಂಬ ನಿರ್ಧಾರದೊಂದಿಗೆ ದ್ವಾರಕೆಗೆ ಹೋದರೂ ದೈನ್ಯಯಾಚನೆ, ಗೆಳೆಯನೆಂಬ ನೆಪದಲ್ಲಿ ಸಾಧ್ಯವಿಲ್ಲದೆ ಸುಮ್ಮನಾಗುತ್ತಾನೆ. ಅನಾಯಾಸವಾಗಿ, ಕೃಷ್ಣ ಕೃಪೆಯಿಂದ, ತನ್ನರಿವಿಲ್ಲದೆಯೇ ದೊರೆತ ಸಿರಿಯೂ ಅವನಿಗೆ ಬೇಡವಾಗುತ್ತದೆ. ಆತ್ಮಾನಂದ, ಆತ್ಮಸುಖದ ಎದುರು ಸಿರಿಗೆ ಬೆಲೆ ಇಲ್ಲವೆಂಬ ಕುಚೇಲನ ನಿಲುವಿನಲ್ಲಿ ಪು.ತಿ.ನ.ರ ನಿಲುವೂ ಇದೆ."

ಕುಚೇಲ ಭಕ್ತಿಯ 'ಪರಾಕಾಷ್ಠೆ'ಗೆ ಒಡ್ಡಿದ ಪ್ರತಿಮೆಯಾಗಿದ್ದಾನೆ. ಪು.ತಿ.ನ.ರ ಭಕ್ತಿಧಾರೆಯ ಪ್ರವಾಹಕ್ಕೆ ಇದೊಂದು ಸಮರ್ಥ ಮಾಧ್ಯಮ, ಸಮರ್ಥವೇದಿಕೆ. ಭಕ್ತಿ ಪ್ರಧಾನ ಕಾವ್ಯಕ್ಕೆ ಸಂಗೀತದ ಮೇಳವಿಕೆ ರೋಮಾಂಚಕಾರಿ ಅನುಭವಕ್ಕೆ ಎಡೆಮಾಡಿಕೊಟ್ಟಿದೆ.

ಕೃಷ್ಣಕೇಂದ್ರಿತ ಯಾವುದೇ ಗೀತನಾಟಕವಾದರೂ 'ಕೃಷ್ಣ' ಭಕ್ತಿ, ಕೃಷ್ಣ ಪಾರಮ್ಯಗಳೇ ಮುಖ್ಯ

ಇವುಗಳಲ್ಲದೆ 'ಪರ್ವ'ಕೇಂದ್ರಿತ ಗೀತನಾಟಕವಾದ 'ದೀಪಲಕ್ಷ್ಮಿ' ಯಲ್ಲಿಯೂ, 'ದೀಪಾವಳಿ' ಹಬ್ಬದ ಹಿನ್ನೆಲೆಯನ್ನು ನೆನಪಿಸಿಕೊಳ್ಳುವಾಗ ಶ್ರೀಕೃಷ್ಣನಿಂದ ನರಕಾಸುರವಧೆಯಾದ ಸಂದರ್ಭ ನೆನಪಿಗೆ ಬರುತ್ತದೆ. ಅವನ ದಿಗ್ವಿಜಯದ ಕುರುಹಾಗಿ, ಅಂಧಕಾರ, ಅಜ್ಞಾನ, ತಾಮಸಗಳ ಮೇಲೆ ಗಳಿಸಿದ ವಿಜಯದ ಸಂಕೇತವಾಗಿ ಈ ದೀಪೋತ್ಸವ. ಪು.ತಿ.ನ.ಅವರಿಗೆ ನಮ್ಮ ಸಂಸ್ಕೃತಿ ಪರಂಪರೆಯ ಭಾಗವಾದ ಹಬ್ಬ ಹರಿದಿನಗಳ ಆಚರಣೆಯಲ್ಲಿ ಶ್ರದ್ಧೆಯಿದೆ. ಇವು ಕೇವಲ ಶುಷ್ಕ ಆಚರಣೆಯ ಕ್ರಿಯೆಗಳಲ್ಲ. ಇವುಗಳ ಹಿಂದೆ ಅರ್ಥವಿದೆ, ಭಕ್ತಿ ಗೌರವ ಶ್ರದ್ಧೆಗಳಿಂದ, ಬದುಕನ್ನು ಆವರಿಸಿರುವ ಅಜ್ಞಾನಾಂಧಕಾರಗಳು ದೂರವಾಗಿ ಸುಖ, ಸಂಪತ್ತು, ಸಂತೋಷಗಳು ಲಭಿಸಲೆಂದು ಲಕ್ಷ್ಮೀಯನ್ನೂ ದೀಪ ಲಕ್ಷ್ಮೀಯನ್ನೂ

ಪ್ರಾರ್ಥಿಸಬೇಕೆನ್ನುತ್ತಾರೆ. ಕೃಷ್ಣ ಬೆಳಕಿನ ಸಂಕೇತ, ನರಕಾಸುರ ಕತ್ತಲಿನ ಸಂಕೇತ. ಕತ್ತಲಿನ ಮೇಲೆ ಬೆಳಕಿನ ದಿಗ್ವಿಜಯ! ದೀಪಗಳನ್ನು ಹಚ್ಚಿ ಉರಿಸಿ ಎಲ್ಲೆಡೆ ಬೆಳಕಿನ ವಾತಾವರಣ ಸೃಷ್ಟಿಸಿ ಕತ್ತಲನ್ನು ಕೊಲ್ಲುವುದರ ಮೂಲಕವಾಗಿ 'ಕೃಷ್ಣ'ನೆಡೆಗೆ ಫ್ಲಾಶ್ ಬ್ಯಾಕ್ ತಂತ್ರದಿಂದ ಸಾಗುತ್ತಾರೆ. ಆದರೆ ಅತಿ ಚಿಕ್ಕದಾದ ಈ ಗೀತನಾಟಕದಲ್ಲಿ ಕೃಷ್ಣನ ಪ್ರಾಸಂಗಿಕ ಪ್ರಸ್ತಾಪದ ಹೊರತು ಹೆಚ್ಚಿನ ಭಕ್ತಿ ಪ್ರದರ್ಶನಕ್ಕೆ ಅವಕಾಶವಿಲ್ಲವಾಗಿದೆ.

ಭಾವುಕ ಸಹಚರಿಯರ ಮೂಲಕ, ದೀಪಾವಳಿಗೆ ಕಾರಣವಾದ ನರಕಾಸುರನನ್ನು ಸಂಹರಿಸಿದ ಆ ಶ್ರೀಚಕ್ರದ ಉರಿವ ಬೆಂಕಿ ಸೌಮ್ಯರೂಪದ ದೀಪವಾದ ಬಗೆ ಹೇಗೆಂಬ ಜಿಜ್ಞಾಸೆಗೆ ಉತ್ತರ ನೀಡುತ್ತಾರೆ. ದೀಪೋತ್ಸವ ಸಂಭ್ರಮ, ಹಬ್ಬದ ಸಡಗರದಿಂದ ಓಡಾಡುವ ಹೆಂಗಸರು, ವಿಶೇಷಾಲಂಕಾರಗಳಿಂದ "ಬೆಳಗೆ ನಮ್ಮೀ ದೀವಿಗೆ ಕಳೆಯ ಚೆಲ್ಲುತೆಲ್ಲ ತಾವಿಗೆ" ಹಾಗೆಯೇ ಎಲ್ಲಿಂ ಬಂದಿತೀದೀವಿಗೆ ? "ಎಂದು ಪ್ರಶ್ನಿಸಿಕೊಳ್ಳುತ್ತ ತಮಗೆ ತಾವೇ ಸಮಾಧಾನಗಳನ್ನು ಕೊಟ್ಟುಕೊ ಳ್ಳುತ್ತಾರಾದರೂ ಭಾವುಕ-ಸಹಚರಿಯ ಈ ಪ್ರಶ್ನೆಯ ಎಳೆಹಿಡಿದು ನರಕನ ಅಂತಃ ಪುರದೆಡೆಗೆ, ಸಹಚರಿ ಸಮೇತ ಕಾಲ ಪ್ರವಾಹದ ಇದಿರುಹಾಯ್ದು" ಬೆಳಕಿನಮೂಲ ಶಿಖರಕ್ಕೇ ತೆರಳುತ್ತಾರೆ.

ಅವರ ಬಗೆಗಣ್ಣಿನ ಮುಂದೆ ದ್ವಾಪರಯುಗದ ಬಾಗಿಲು ತೆರೆದು ಕೊಳ್ಳುತ್ತದೆ. ನರಕಾಸುರನ ಅಂತಃ ಪುರ, ಸೆರೆಮನೆ, ಶ್ರೀಕೃಷ್ಣ ಎಲ್ಲವುಕಾಣಿಸಿಕೊಳ್ಳುತ್ತದೆ. ಪೌರಾಣಿಕ ಸನ್ನಿವೇಶದ ಅವತರಣವಾಗುತ್ತದೆ. ಗರುಡವಾಹನನಾಗಿ, ತಮ್ಮನ್ನು ಸೆರೆಯಿಂದ ಬಿಡಿಸಲು ಬಂದ ಕೃಷ್ಣನನ್ನು ರಾಜಕುಮಾರಿಯರು ಹಾಡಿ ಹೊಗಳುತ್ತಾರೆ, 'ಆರೇ ಮೋಹನ' "ಚೆಲ್ವಿರರಳನು ನಂದನದ," 'ಪದುಮನಾಭನ ಹೃದಯ ವಿಹಾರಣಿ' ಮುಂತಾದ ಹಾಡುಗಳಲ್ಲಿ ಕೃಷ್ಣನ ಚೆಲುವು, ಸೌಂದರ್ಯ, ವಿಲಾಸ ವೈಭವಗಳನ್ನು ಬಣ್ಣಿಸುತ್ತಾರೆ. ಭಾಗವತ ಕವಿ ಪು.ತಿ.ನ. ಅವರಿಗೆ ತಮ್ಮ ಭಕ್ತಿಪುರಸ್ಸರತೆಯನ್ನು ಅಭಿವ್ಯಂಜಿಸಲು ಈ ಸನ್ನಿವೇಶ ಒಳ್ಳೆಯ ಅವಕಾಶವನ್ನು ಒದಗಿಸಿದೆ. ಅವರ ಕಣ್ಣಲ್ಲಿ 'ಕೃಷ್ಣ' ದೈವತ್ವದ ನೆಲೆಯಲ್ಲಿದ್ದಾನೆ. 'ಗರುಡನೇರಿ ಬರುವ ಧೀರ' 'ಬೆಳಕನೆರಚಿ ಬರಶ್ಯಾಮಸುಂದರ'

'ಹೊಂಬಿಸಿಲನು ಧರಿಸಿಹ ನಭದಂಥವ' 'ದುರಿತದಮನ ಸಿರಿ ಹರುಷದವ'ಎಂದೆಲ್ಲಾ ಬಗೆ ಬಗೆಯಲ್ಲಿ ಕವಿ ಮನಸ್ಸು ಬಣ್ಣಿಸುತ್ತದೆ. ಭಾವುಕ ಸಹಚರಿಯರೊಂದಿಗೇ ಭವದಿಂದ ಬಾನಿಗೇರಿದ ಮನಸ್ಸು ದಿವ್ಯ ಸುಂದರ ಮೂರ್ತಿ ಶ್ರೀಕೃಷ್ಣದರ್ಶನ ಪಡೆದು, ಅವನಿಂದ ಮುಕ್ತರಾದ ರಾಜಕುಮಾರಿಯರ, ಅಪ್ಸರೆಯರ ಮಹದಾನಂದ ಪೂರಿತವಾದ ಶ್ರೀ ಕೃಷ್ಣಪೂಜೆ, ಒಸಗೆ, ಮಂಗಳಾರತಿಗಳಲ್ಲಿ ಪಾಲ್ಗೊಂಡು ಮೈಮರೆತಿದ್ದು ಕೆಲಕಾಲದ ನಂತರ ವಾಸ್ತವ ಜಗತ್ತಿಗೆ ಮರಳುತ್ತದೆ. ಶ್ರೀ ಕೃಷ್ಣನಿಗೆ ಬೆಳಗಿದ ಆರತಿಯ ಕುಡಿಯನ್ನೇ ಕೊಂಡು ನಮ್ಮನಾಡಿನ ಕನ್ನಿಕೆಯರು ಮೆರೆಸುತ್ತಿದ್ದಾರೆನ್ನುವುದು ಕವಿ ಕಲ್ಪನೆ.

ಪು.ತಿ.ನ.ರ ಆಸ್ತಿಕ ಮನಸ್ಸು. ಧಾರ್ಮಿಕ ಮನೋಭಾವ ಕಟ್ಟಿಕೊಡುವ ಉಪಮೆ, ರೂಪಕ, ಪ್ರತಿಮೆ, ಪ್ರತೀಕಗಳೆಲ್ಲವೂ ದೈವಿಕ, ಧಾರ್ಮಿಕ, ಪೌರಾಣಿಕ ಸಂದರ್ಭಗಳಿಂದಲೇ ಬಂದವುಗಳಾಗಿರತ್ತವೆ. ಅವರ ಕಲ್ಪನೆಯಲ್ಲಿ ದೀಪಗಳು ಹರಿಭವತರುವಿನಲ್ಲಿ ಅರಳಿಸಿದ ಅರಳುಗಳಂತೆಯೂ. ಇರವನ್ನು ರಸದೆಡೆಗೆ ಎಸೆಯುವ ಸರಳುಗಳಂತೆಯೂ ಮೃತ್ಯುವಿನಲ್ಲಿರುವ ಅಮೃತದ ಸೆಲೆಯ ಕುರುಹಿನಂತೆಯೂ ಕಾಣಿಸುತ್ತವೆ.

ಇಲ್ಲಿಯೂ ದೀಪಾವಳಿ, ದೀಪೋತ್ಸವಗಳನೆವದಲ್ಲಿ ಕೃಷ್ಣಸ್ಮರಣೆಯೇ ಪ್ರಮುಖವಾಗಿದೆ. ಅವನ ವಿಜಯ ಸಂಕೇತವಾದ ದೀಪಗಳೂ ಅವನಷ್ಟೆ ಇವರಿಗೆ ಪ್ರಿಯವಾಗುತ್ತವೆ. ದೀಪಶೋಭೆ, ದೀಪಕಾಂತಿಯ ಸೌಂದರ್ಯ ದೀಪಾವಳಿ ಸಂಭ್ರಮದ ವಿವರಣೆ-ಎಲ್ಲವೂ 'ಶ್ರೀಕೃಷ್ಣವಿಜಯ'ಕ್ಕೆ ಪೂರಕವಾಗಿ ಬಂದಿವೆ.

ಹೀಗೆ ಗೋಕುಲನಿರ್ಗಮನ, ಕುಚೇಲ ಕೃಷ್ಣ ದೀಪಲಕ್ಷ್ಮಿ 'ಕೃಷ್ಣ ತತ್ವ'ಚಿಂತನೆಯನ್ನೇ ಒಳಗೊಂಡಿದ್ದರೂ 'ಗೋಕುಲನಿರ್ಗಮನವೇ' ಅವರ ಭಾಗವತ ಮನಸ್ಸಿನ ವಿಸ್ಕೃತ ನೋಟವನ್ನು ಕೊಡುವಲ್ಲಿ ಸಫಲವಾಗಿದೆ.

**ಸತ್ಯಾಯನ ಹರಿಶ್ಚಂದ್ರ:-**

ರಾಮಾಯಣ, ಭಾಗವತ, ಭಾರತಗಳನ್ನು ಬಿಟ್ಟರೆ ಕವಿ, ಪು.ತಿ.ನ. ಅವರಿಗೆ ವಸ್ತುವನ್ನು ಒದಗಿಸಿದ ಆಕರಗಳು ಪುರಾಣಗಳು ಮತ್ತು ಸಂಸ್ಕೃತ

ಕಾವ್ಯಗಳು. ಹಳೆಯ ವಸ್ತುವನ್ನೇ ತೆಗೆದುಕೊಂಡು ಆದಷ್ಟೂ ನವೀಕರಿಸುವ ಮತ್ತು ಸಮಕಾಲೀನ ಮನೋಧರ್ಮಕ್ಕೆ ಒಗ್ಗಿಸಿಕೊಂಡು ಹೊಸ, ಅರ್ಥ ಮೌಲ್ಯಗಳನ್ನು ಕಲ್ಪಿಸುವ ಪ್ರಯತ್ನಕ್ಕೆ ಹೊರಟು ಈ 'ಯಕ್ಷರೂಪಕ'ವೆಂದು ಕರೆವ ಗೀತನಾಟಕವನ್ನು ರಚಿಸಿದರು. 'ಹರಿಶ್ಚಂದ್ರ'ನ ಕತೆಯನ್ನೇ ಆರಿಸಿಕೊಳ್ಳಲು ಹರಿಶ್ಚಂದ್ರ ಒಬ್ಬ ವ್ಯಕ್ತಿಯಾಗಿ ಕಾಣದೆ, 'ಸತ್ಯ,' ಮೌಲ್ಯದ ಪ್ರತೀಕವಾದ, ಸತ್ಯದ ಮೂಲಕವೇ ಶಿವ ಸಾಕ್ಷಾತ್ಕಾರವನ್ನು ಸಾಧ್ಯವಾಗಿಸಿಕೊಂಡವನು; ಸತ್ಯ, ಶಿವ, ಸುಂದರಗಳ ಸಮನ್ವಯ ದರ್ಶನವನ್ನೂ ಪ್ರಜ್ಞಾಂತರ್ಗವಾಗಿಸಿಕೊಂಡವನು ಎನಿಸಿದ್ದಲ್ಲದೆ ಅವರಿಗೆ ಪುರಾತನ ಕತೆಗಳು ಮೌಲ್ಯನಿಧಿಗಳೆನಿಸಿವೆ. ಹರಿಶ್ಚಂದ್ರನ ಕತೆಯ ರೋಚಕತೆ, ಅವನ ಸತ್ಯ ನಿಷ್ಠೆ, ಅದಕ್ಕಾಗಿ ಅವನು ಪಟ್ಟ ಪಾಡು-ಎಲ್ಲ ಕಾಲದ, ಎಲ್ಲ ವಯಸ್ಸಿನ ಮನಸ್ಸುಗಳನ್ನು ಕಲಕಿ ಸ್ಪಂದನಶೀಲವಾಗಿಸುವ ಅಂತಃ ಶಕ್ತಿಯನ್ನು ಹೊಂದಿದೆ, ಎನ್ನುವ ನಂಬಿಕೆ ಒಂದೆಡೆಯಾದರೆ ಆ ಕಥೆಯ ಮುಖ್ಯಪಾತ್ರಗಳಾದ ಹರಿಶ್ಚಂದ್ರ, ವಿಶ್ವಾಮಿತ್ರ-ಇಬ್ಬರ ಚರಿತ್ರೆಯಲ್ಲಿಯೂ ಕಾಣಿಸಿಕೊಂಡ ವಿರುದ್ಧಾಂಶಗಳು ಮತ್ತೊಂದೆಡೆ. ವೇದಗಳಲ್ಲಿ, ಪುರಾಣಗಳಲ್ಲಿ, ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತಾರಾದರೂ ಅವರ ವ್ಯಕ್ತಿತ್ವ ಸ್ವಭಾವಗಳಲ್ಲಿ ಕಾಣಿಸಿಕೊಂಡ ಅಸಂಬದ್ಧತೆಯ ಬಗೆಗಿನ ಗಾಢ ಚಿಂತನೆ ಈ ನಾಟಕದ ರಚನೆಗೆ ಪ್ರೇರಣೆಯಾಗಿದೆ. ತಮ್ಮದೇ ಆದ ಒಂದು ತಾರ್ಕಿಕ, ತಾತ್ವಿಕ ನಿಲುವನ್ನು ತಲುಪುತ್ತಾರೆ.

ಪು.ತಿ.ನ ಅವರ ತತ್ವಚಿಂತನೆಯ ಮನೋಧರ್ಮಕ್ಕೆ ಈಗಾಗಲೇ ಸಿದ್ಧವಾದ 'ಹರಿಶ್ಚಂದ್ರ'ಪ್ರಸಂಗವನ್ನು ಪುನಃ ಬಿತ್ತರಿಸುವುದಕ್ಕಿಂತ, ಹರಿಶ್ಚಂದ್ರ-ವಿಶ್ವಾಮಿತ್ರರಿಬ್ಬರ ಚರಿತ್ರೆಯ ಹಿನ್ನೆಲೆಯಲ್ಲಿ ಹೊಸಕಾಣ್ಕೆ ಯೊಂದನ್ನು ಕಟ್ಟಿಕೊಡುವ ಅಗತ್ಯವೆನಿಸಿದೆ. ಹರಿಶ್ಚಂದ್ರನ ಪೂರ್ವ ಚರಿತ್ರೆ, ಮಗನನ್ನು ಬಲಿಕೊಡಬೇಕಾದ ಸನ್ನಿವೇಶದಲ್ಲಿ ವಚನಭ್ರಷ್ಟ : ತನ್ನ ಮಗನಿಗೆ ಬದಲಾಗಿ ಶುನಶ್ಶೇಪನನ್ನು ಬಲಿಕೊಡಲು ಹೊರಡುತ್ತಾನೆ, ಆದರೆ ಇಂತಹ ವ್ಯಕ್ತಿಯೇ 'ಸತ್ಯ'ಕ್ಕೆ ಪ್ರತೀಕವಾಗಿ ನಿಲ್ಲುವುದು ಒಂದು ವ್ಯಂಗ್ಯವೆನಿಸುತ್ತದೆ. ಆದರೆ ಮುಂದಿನ ಅವನ ಸತ್ಯನಿಷ್ಠೆ ಹಿಂದಿನ ವ್ಯಕ್ತಿತ್ವದ ಮುಖವನ್ನು ಮರೆಸಿ ಬಿಡುತ್ತದೆ.

ವಿಶ್ವಾಮಿತ್ರನ ವಿಷಯಕ್ಕೆ ಬಂದಾಗ ಅವನಲ್ಲಿ ದ್ವಂದ್ವಗಳನ್ನು ಗುರುತಿಸುತ್ತಾರೆ. ರಾಮಾಯಣದಲ್ಲಿ, ವೇದಗಳಲ್ಲಿ ಕಾಣುವ ವಿಶ್ವಾಮಿತ್ರನಿಗೂ ಚಂಡಕೌಶಿಕನೆನಿಸಿ, ವಸಿಷ್ಠನ ಮೇಲಿನ ದ್ವೇಷಕ್ಕೆ ಹರಿಶ್ಚಂದ್ರನನ್ನು ಕಾಡುವ ವಿಶ್ವಾಮಿತ್ರನಿಗೂ ಎಲ್ಲಿಯೂ ಹೋಲಿಕೆಯಿಲ್ಲ, ವಿಶ್ವಾಮಿತ್ರ ಪಾತ್ರದಲ್ಲಿ ಏಕಸೂತ್ರತೆ ಇಲ್ಲ. ಏಕಸೂತ್ರತೆಯ ಕೊರತೆಯನ್ನು ನಿವಾರಿಸಿ ಪರಂಪರೆಯ ಅವ್ಯಾಹತತೆಯನ್ನು ಉಳಿಸಿ ವಿಶ್ವಾಮಿತ್ರ ಪಾತ್ರಕ್ಕೆ ನ್ಯಾಯ ಸಲ್ಲಿಸುವ ಉದ್ದೇಶದಿಂದ ಈ ನಾಟಕ ರಚನೆಗೆ ಹೊರಟರು. ಋಷಿಯಾಗಿಯೂ ಇನ್ನೂ ಕೋಪ, ಛಲಗಳನ್ನು ಆತನಲ್ಲಿ ಊಹಿಸಿ ಕೊಳ್ಳುವುದು ಸಾಧ್ಯವಿಲ್ಲವೆನಿಸುತ್ತದೆ. 'ಹರಿಶ್ಚಂದ್ರನನ್ನು' ಅವನ ಸತ್ಯಮೌಲ್ಯ ನಿಷ್ಠೆಯನ್ನು ಕುತೂಹಲಿಯಾಗಿ ಪರೀಕ್ಷಿಸುವುದಕ್ಕೆಂದೇ ಹಾಗೆ ನಿಷ್ಠುರವಾಗಿ ನಡೆದುಕೊಂಡಂತೆ ತೋರುವುದರಲ್ಲಿಯೇ ವಿಶ್ವಾಮಿತ್ರ ಪಾತ್ರಕ್ಕೆ ನ್ಯಾಯ ಸಲ್ಲುತ್ತದೆನಿಸುತ್ತದೆ, ಮತ್ತು ಆತನ ಸ್ವಭಾವಕ್ಕೆ ವಿಹಿತವೆನಿಸುತ್ತದೆ. ಆಗಮಾತ್ರವೇ ಶೃತಿ, ರಾಮಾಯಣಗಳ ವಿಶ್ವಾಮಿತ್ರನಿಗೂ, ಹರಿಶ್ಚಂದ್ರ ಪ್ರಸಂಗದ ವಿಶ್ವಾಮಿತ್ರನಿಗೂ ಒಂದು ಬಗೆಯ ಏಕಸೂತ್ರತೆ ಏರ್ಪಡುತ್ತದೆ. ಎನ್ನುವ ವಿಚಾರದೊಂದಿಗೆ ಹೊರಡುವ ಪು.ತಿ.ನ. ಹರಿಶ್ಚಂದ್ರನ ಆತ್ಮವಿಕಾಸದ, ಸತ್ಯಶೋಧಗಳ ಜೊತೆಜೊತೆಗೆ, ವಿಶ್ವಾಮಿತ್ರನೂ ಸ್ವಯಂ ಶೋಧ್ಯನೂ ಆಗುತ್ತಾನೆ; ಆತ್ಮ ವಿಕಾಸದ ಪ್ರಕ್ರಿಯೆಗೂ ಒಳಗಾಗುತ್ತಾನೆ ಎಂಬಂತೆ ಚಿತ್ರಿಸಿದ್ದಾರೆ. ವಿಶ್ವಾಮಿತ್ರ, ವಸಿಷ್ಠನ ಎದುರಲ್ಲಿ ಇನ್ನೂ ಬೆಳೆಯ ಬೇಕಾದವನು; ಅನಹಂವಾದಿತ್ವ ಇನ್ನೂ ಅವನಿಗೆ ಲಭ್ಯವಾಗಿಲ್ಲ. ಆದರೆ ಆತನಲ್ಲಿ ಮಂಗಳಮೌಲ್ಯಗಳು ನೆಲೆಗೊಂಡಿದ್ದರೂ ಅವುಗಳನ್ನು ಗುರುತಿಸಲಾಗದ ಸ್ಥಿತಿಯಲ್ಲಿದ್ದಾನೆ. ಅದಕ್ಕಾಗಿಯೇ ವಸಿಷ್ಠರು ವಿಶ್ವಾಮಿತ್ರನ ಆತ್ಮಾಭಿಮಾನದ ಛಲವನ್ನು 'ಹರಿಶ್ಚಂದ್ರ'ನ ವಿಚಾರದಿಂದಾಗಿ 'ಕೆರಳಿಸಿ ಎಬ್ಬಿಸಿ ನಿರಸ್ತಗೊಳಿಸಿ, ನಮಗೆ ಸಾಧಾರಣರೆಂದು ತೋರುವ ಮನುಷ್ಯರಲ್ಲೂ ಮಂಗಳ ಮೌಲ್ಯಗಳು ಮನೆಮಾಡಿಕೊಂಡು ವಿಕಾಸಕ್ಕೆ ತಕ್ಕ ಅವಕಾಶವನ್ನು ಕಾದು ಕುಳಿತಿರುವ ಅಂಶ ಆತನಿಗೆ ಗೋಚರವಾಗುವ ಹಾಗೆ ಮಾಡಿ, ಅಂತಹ ವಿಕಾಸಾಶ್ರಯವಾದ ಮಹಾಮಂತ್ರವನ್ನು ದರ್ಶಿಸಲು, ಪುನಃ ತಪವಾಂತು ಬ್ರಹ್ಮರ್ಷಿಸಿದ್ಧಿಯನ್ನು ಪಡೆಯಲು ಅನುವಾಗುವಂತೆ ವಿಶ್ವಾಮಿತ್ರನನ್ನು ಸಂಸ್ಕರಿಸುತ್ತಾನೆ'-ಎನ್ನುವ ತರ್ಕವೇ

ನಾಟಕ ಸೃಷ್ಟಿಯ ಹಿಂದಿದೆ.

ಪುರಾತನ ಕತೆಯನ್ನು, ಕಥೆಯ ದೃಷ್ಟಿಯಿಂದ, ರಚನಾತಂತ್ರದ ದೃಷ್ಟಿಯಿಂದ ಕಾಲೋಚಿತವಾಗಿ ಸ್ವಲ್ಪಮಾರ್ಪಾಟಿಗೆ ಮಾತ್ರವೇ ಅವಕಾಶ ಮಾಡಿಕೊಂಡು, ಪರಂಪರೆಯ ಮೂಲ ಕಥೆಯನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ.

ಬದಲಾವಣೆ ಮಾಡಿಕೊಳ್ಳುವ ಹಂತದಲ್ಲಿ ಸೃಜನಶೀಲ ಬರಹಗಾರನು ಬಹಳ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಅದರಲ್ಲಿಯೂ ಇಂತಹ ಪ್ರಸಿದ್ಧ ಕಥಾನಕಗಳ ವಿಚಾರದಲ್ಲಿ ಮತ್ತೂ ಎಚ್ಚರಿಕೆ ಅಗತ್ಯವಾಗುತ್ತದೆ. ಏಕೆಂದರೆ "ಈ ಕತೆಗಳು ನಮ್ಮ ಸಾಂಸ್ಕೃತಿಕ ಸಂಪತ್ತಿಗೆ ಆಕರಗಳಾಗಿ ತಲೆಮಾರಿನಿಂದ ತಲೆಮಾರಿಗೆ ಎಲ್ಲೂ ತಂಗದೆ ಬರುವಂಥವು, ನಮ್ಮ ಜನಾಂಗದ ಅಂತಃಕರಣದ ಮೂಲ ದ್ರವ್ಯಗಳಿವು." ಆದ್ದರಿಂದ, ಹಿಂದಿನದೆಲ್ಲವನ್ನೂ ಉಳಿಸಿಕೊಂಡು, ಹೊಸದನ್ನು ಸೇರಿಸುತ್ತಾ, ಮುಂದಿನ ಕಾಣ್ಕೆಯನ್ನೂ ಅಳವಡಿಸುತ್ತಾ ಹೋಗುವುದು ಕ್ಷೇಮಕರ. ಈ ಸಂದರ್ಭದಲ್ಲಿ ಪು.ತಿ.ನ.ಅವರು 'ಪ್ರಾಪ್ತಿ,' 'ಪರ್ಯಾಪ್ತತೆ'ಗಳನ್ನು ವಿವರಿಸುತ್ತ, ಹೊಸ ಸೃಷ್ಟಿಯಲ್ಲಿ ಇವುಗಳ ಪಾತ್ರವೇನೆಂದು ಚರ್ಚಿಸ ತೊಡಗುತ್ತಾರೆ. 'ಪ್ರಾಪ್ತಿ'ಗಳು ನಮ್ಮ ವಿಕಾಸಕ್ಕೆ ಅಡ್ಡಿಗಳು, ಈಗಾಗಲೇ ನಮಗೆ ಲಭ್ಯವಾಗಿರುವ ಅನುಭವ ಗಳಿಗಷ್ಟಕ್ಕೇ ಸೀಮಿತಗೊಂಡು ಉಳಿದು ಬಿಟ್ಟರೆ ನಮ್ಮಲ್ಲಿನ ವಿಕಸನ ಪ್ರಕ್ರಿಯೆಯೇ ನಿಂತು ಬಿಡುತ್ತದೆ. ಆತ್ಮಜಡತೆ ಏರ್ಪಡುತ್ತದೆ. ಇದನ್ನೇ ಪು.ತಿ.ನ.ಅವರು ಪ್ರಾಪ್ತಿ ಭೋಗಾವಸ್ಥೆ ಎಂದು ಕರೆಯುತ್ತಾರೆ. ವಿಜ್ಞಾನ ಕ್ಷೇತ್ರದಲ್ಲಿ ತೀರಾ ಪರಿಚಿತವಾಗಿರುವ ಈ ಪರ್ಯಾಪ್ತ (Saturated) ಎನ್ನುವ ಪದಕ್ಕೆ ಪು.ತಿ.ನ. ಅವರು ವ್ಯಾಪಕವಾದ ಅರ್ಥ ಆಯಮಾಗಳನ್ನು ನೀಡಿದ್ದಾರೆ. ಭೌತಿಕ ಶಾರೀರಿಕ ವಿಕಾಸ ಪ್ರಕ್ರಿಯೆಯಲ್ಲಿ ಪರ್ಯಾಪ್ತತೆಯನ್ನೂ ಒಪ್ಪಿಕೊಳ್ಳಬಹುದಾದರೂ ಆತ್ಮಿಕ, ಬೌದ್ಧಿಕ ವಿಕಾಸ ಪ್ರಕ್ರಿಯೆಯಲ್ಲಿ ಪರ್ಯಾಪ್ತತೆಗೆ ಎಡೆಯಿಲ್ಲ. ಅದನ್ನು ಮೀರಿ ಅದನ್ನು ಭಂಗಿಸುತ್ತ ನಡೆಯದಿದ್ದಲ್ಲಿ, ಇಂದು ನಾವು ಕಾಣುತ್ತಿರುವ, ವಿಜ್ಞಾನ, ತಂತ್ರಜ್ಞಾನ, ಕಲೆ, ಸಾಹಿತ್ಯ, ಮುಂತಾದ ಕ್ಷೇತ್ರಗಳಲ್ಲಿನ ಸಾಧನೆಯ ಔನ್ನತ್ಯ ಸಾಧ್ಯವಾಗುತ್ತಿರಲಿಲ್ಲ. ಪ್ರಾಪ್ತಿ,

ಪರ್ಯಾಪ್ತತೆಗಳಲ್ಲಿ ಉಳಿದು ಜೀವನ ಮಡುಗಟ್ಟಿ ಕೊಳೆತು ನಾರುವುದ ಯಾವ ಕಾಲಕ್ಕೂ ಸ್ವಾಗತಾರ್ಹವಲ್ಲ. ಮನುಷ್ಯ ವಿಕಾಸದ ಇತಿಹಾಸವ ಪರಿಶೀಲಿಸಿದರೆ, ಎಲ್ಲಿಂದ ಎಲ್ಲಿಗೆ ತಲುಪಿದ್ದೇವೆ ಎನ್ನುವುದ ಸ್ಪಷ್ಟವಾಗುತ್ತದೆ. ಮನುಷ್ಯನಿಗೆ ಇಂದು ಅಸಾಧ್ಯವಾದುದು ಯಾವುದ ಇಲ್ಲ. ಜಗತ್ತನ್ನೇ ಗೆಲ್ಲಬಲ್ಲ; ಭೂಮ್ಯಾಕಾಶಗಳಲ್ಲಿ ವಿಹರಿಸಬ ಕುಳಿತೆಡೆಯಿಂದಲೇ ವಿಶ್ವವನ್ನು ನಿಯಂತ್ರಿಸಬಲ್ಲ; ಸೃಷ್ಟಿ ರಹಸ್ಯಗಳನ್ ಸ್ಫೋಟಿಸಬಲ್ಲ. ಇದೆಲ್ಲ ಸಾಧ್ಯ ವಾದದ್ದು ಪರ್ಯಾಪ್ತತೆಯನ್ನು ಮೀ ಭಂಗಿಸಿ ಹೊರಟದ್ದರಿಂದ, ಈ ಬಗೆಯ ಭಂಜಕತೆ ಸಾಧ್ಯವಾಗುವುದ ಮಹಾತ್ಮರಿಗೆ ಮಾತ್ರ, 'ವಿಷಯ ಕ್ಷೇತ್ರದಲ್ಲಿ ಮಿತಿಗಳನ್ನು ಮುರಿದ ಪ್ರಗತಿಯನ್ನು ಸಾಧಿಸಿಕೊಳ್ಳುವುದು ಭೌತಧರ್ಮಾಯನ, ವಿಷಯ ಧರ್ಮಾಯನ ಅಥವಾ ಋತಾಯನ' ಎನ್ನುವುದಾದರೆ, ಅಂತಃ ಕರಣ 'ಆತ್ಮವಿಕಸನ' ಪ್ರಕ್ರಿಯೆಯನ್ನು 'ಭಾವಧರ್ಮಾಯನ' ಅಥವ 'ಮೌಲ್ಯಯನ'ವೆಂದು ಗುರುತಿಸುತ್ತಾರೆ.

ಮಾನವ ವಿಕಾಸದ ಹಾದಿಯಲ್ಲಿ 'ಭೌತಧರ್ಮಾಯನ ಭಾವಧರ್ಮಾಯನಗಳೆರಡೂ ಅನಿವಾರ್ಯ, 'ಭೌತಧರ್ಮಾಯನ'ದ ನಿರತನಾದ ಆತ್ಮಶಾಲಿ ವಿಜ್ಞಾನಿ ನೈಸರ್ಗಿಕ ಮಿತಿಗಳನ್ನು, ಪ್ರತಿಬಂಧಕಗಳನ ಮೀರಿ, ವಿರೋಧಿಸಿ, ಪ್ರತಿಭಟಿಸಿ, ತನ್ನರಿವನ್ನು ಹೆಚ್ಚಿಸಿಕೊಂಡ ಹಳೆಯದನ್ನೆಲ್ಲ ಪರಿಶೀಲಿಸಿ, ಪರಿಷ್ಕರಿಸಿ, ಭೇದಿಸಿ, ಒಳಹೊಕ್ಕುನೋ ಹೊಸ ಆವಿಷ್ಕಾರಗಳಿಗೆ ಎಡೆಮಾಡಿಕೊಳ್ಳುವುದರ ಮೂಲ ಆತ್ಮಜಡತೆಯನ್ನು ಕೊಡವಿಕೊಂಡು ವಿಕಸನ ಪ್ರಕ್ರಿಯೆಯನ ಮುಂದುವರೆಸುತ್ತಾ ಹೊಗುತ್ತಾನೋ ಅಂತೆಯೇ ಆತ್ಮಶಾಲಿಯಾ ಭಾವುಕ, ಕವಿ, ಕಲಾವಿದ, ಯೋಗಿ, ತಪಸ್ವಿ ಮುಂತಾದವರು ತಮ ಭಾವಧರ್ಮಾಯನದಲ್ಲಿ, 'ಶಾಸ್ತ್ರಾಗಮ ಕಲ್ಪ ಸಂಪ್ರದಾಯವಾದಿಗಳಿಂದ ಏರ್ಪಡುವ ಪರ್ಯಾಪ್ತತೆಯನ್ನು ಒಪ್ಪಿಕೊಳ್ಳಲಾರರು.' ಈ ಪರ್ಯಾಪ್ತತೆಯನ್ನು ಭಂಗಿಸಿದಲ್ಲದೆ. ಅವರಿಗೆ ಸಮಾಧಾನವಾಗಲಾರದು.

"ಪ್ರತಿಭಟನೆಯೇ ವಿಜಯದ ಕುರುಹು. ವಿಕಾಸಯಾತ್ರೆಯ ವಿಜಯ ಸಂಕೇತ" ಸೃಷ್ಟಿಯಲ್ಲಿ ಬೇಕಾಗಿರುವುದು "ಮನುಷ್ಯನ ಸ್ವಮಿ

ರಂಗ ವಿಕ್ರಮ". ಹಳೆಯದರ ಜೊತೆಗೆ ಹೊಸತನದ ಬೆಸುಗೆ! ಮಿತಿಗಳಲ್ಲಿ ಉಳಿದು ಬಿಡುವುದು ಮಾನವ ಚೇತನಕ್ಕೆ ಸಲ್ಲದು. "ಅದರ ಯಾತ್ರೆ ಅಮಿತ-ಅಖಂಡ, ಅನಂತವನ್ನು ಮುಟ್ಟುವವರೆಗೆ ತೀರದು. ನಾವು ಅಮಿತರಾದಾಗ ಪರಿಪೂರ್ಣರು" -ಎನ್ನುವ ವಿಚಾರಧಾರೆಯೇ ಈ ನಾಟಕದ ಹಿಂದಿನ ಪ್ರಬಲ ಪ್ರಚೋದನೆಯಾಗಿದೆ.

ಪು.ತಿ.ನ. ಅವರು ಹೇಳುವಂತೆ, 'ಮಿತಿ'ಗಳನ್ನು ಮೀರುವ, ಪರ್ಯಾಪ್ತತೆ'ಯನ್ನು ಪ್ರತಿಭಟಿಸುವ ಸಾಮರ್ಥ್ಯ ಎಲ್ಲರಿಗೂ ಸಾಧ್ಯವಿಲ್ಲ. ಮೂಲಭೂತವಾಗಿ ಪ್ರತಿಯೊಬ್ಬ ಮನುಷ್ಯನ ಮನದಾಳದಲ್ಲಿ ಆತ್ಮವಿಕಸನದಾಹ ಅಡಗಿರುವ ಪ್ರಜ್ಞೆಯರಿವು ಇರುವುದಾದರೂ ಸ್ವತಃ ಬೆಳೆಯಲಾರ. ಅದಕ್ಕೆ ಮಹಾತ್ಮರ, ಉನ್ನತ ಚೇತನರ ಮಾರ್ಗದರ್ಶನದ ಅವಶ್ಯಕತೆ ಇರುತ್ತದೆ.

ಸ್ವಭಾವತಃ ಧರ್ಮಿಷ್ಠನಾಗಿದ್ದ ಹರಿಶ್ಚಂದ್ರನ ಅಂತಃಸತ್ವದ ಅರಿವು ವಸಿಷ್ಠನಂತಹ ಉದಾತ್ತ, ಮಹೋನ್ನತ ಚೇತನಕ್ಕೆ ಸಾಧ್ಯವಾಯಿತಾದರೂ, ಕೌಶಿಕನಿಗೆ ಅದು ಸಾಧ್ಯವಾಗುವುದಿಲ್ಲ. ಅವನ ದೃಷ್ಟಿಯಲ್ಲಿ ಹರಿಶ್ಚಂದ್ರ ಶಮ, ದಮ, ತ್ಯಾಗ, ತಪಸ್ಸುಗಳ ಸೋಂಕಿಲ್ಲದ ಯಃಕಶ್ಚಿತ್ ಮನುಷ್ಯಮಾತ್ರ. ಈ ಎರಡೂ ಭಿನ್ನ ದೃಷ್ಟಿಗಳು ಅವರವರ ಆತ್ಮವಿಕಾಸದ ನೆಲೆಗಳನ್ನು ಬಿಂಬಿಸುತ್ತವೆ.

ಕೌಶಿಕನಲ್ಲಿದ್ದ, ತನ್ನೇರುವಿಕೆಯ ಅಹಂಭಾವವೇ ಆತ್ಮ ದೌರ್ಬಲ್ಯವಾಗಿ, ಛಲವಾಗಿ, ಹುರುಡಾಗಿ ಪರಿಣಮಿಸಿ ನಿರಪರಾಧಿ ಹರಿಶ್ಚಂದ್ರನನ್ನು ಕಾಡಲು ತುಡಿಯುತ್ತದೆ. ಆದರೆ ಕಾಡುವ ಮತ್ತು ಸತ್ವ ಪರೀಕ್ಷಿಸುವ ಕ್ರಿಯೆಯೊಳಗೆ ತಾನೇ ತನ್ನ ಸತ್ವ ಪರೀಕ್ಷೆಗೆ ಗುರಿಯಾಗುತ್ತಾನೆ. ಹರಿಶ್ಚಂದ್ರನ ಧೀರಗಂಭೀರ ನಿಲುವು, ಮೇಲಿಂದ ಮೇಲೆ ಎದುರಾಗುವ ಕಷ್ಟಗಳ ಆಕ್ರಮಣವನ್ನು ಸ್ವೀಕರಿಸಿದ ರೀತಿ, ಸತ್ಯಕ್ಕಾಗಿ ನಡೆಸಿದ ಆಗ್ರಹ, ವಿಶ್ವಾಮಿತ್ರನಲ್ಲಿ ಅಚ್ಚರಿ ಮೂಡಿಸಿದ್ದಷ್ಟೇ ಅಲ್ಲ, ಅಳಲುಂಡಷ್ಟೂ ಹೊಗರೇರುತ್ತಿರುವ ಋಷಿತೇಜದ ದರ್ಶನವೂ ಆಗುತ್ತದೆ.

ವಸಿಷ್ಠನ ಮೇಲಿನ ಹುರುಡಿಗೆ ಹರಿಶ್ಚಂದ್ರ ಬಲಿಪಶುವಾಗುತ್ತಾನೆ. ಆದರೆ ಅವನು ಹರಿಶ್ಚಂದ್ರನನ್ನು ಕಾಡಲು, ಅಸಹಾಯಕತೆಗೆ ದೂಡಲು

ಸೃಷ್ಟಿಸುವ ಒಂದೊಂದು ಸನ್ನಿವೇಶ, ಸಂದರ್ಭವೂ ಕೌಶಿಕನನ್ನು ಆ
ಚಿಂತನೆಗೆ ಹಚ್ಚುತ್ತವೆ. ಸೋಲಿನ ಅನುಭವಕ್ಕೆ ದೂಡುತ್ತದೆ. ಹರಿಶ್ಚಂದ್ರ
ಒಂದೊಂದು ಹಂತದ ಗೆಲುವೂ ವಿಶ್ವಾಮಿತ್ರನ ಸೋಲಿ
ಚರಣಗಳಾಗುತ್ತವೆ. ವಿಶ್ವಾಮಿತ್ರನನ್ನು ಆತ್ಮ ವಿಶ್ಲೇಷಣೆಗೆ ಹಚ್ಚುತ್ತದೆ.

ಹರಿಶ್ಚಂದ್ರ ಯಾವ ಅಪರಾಧವನ್ನೂ ಮಾಡದೆ ವಿಶ್ವಾಮಿತ್ರ
ಕ್ರೌರ್ಯಕ್ಕೆ, ಹಿಂಸೆಗೆ ಬಲಿಯಾದರೂ, ಅವನ ಅಚಲ ಆತ್ಮವಿಶ್ವಾಸ, ಸತ್ಯ
ವಿಮುಖವಾಗದ ಛಲಗಳೆದುರು, ವಿಶ್ವಾಮಿತ್ರನ 'ಅಹಂ'ಕುಸಿದು ಬೀಳುತ್ತದ
ಅವನ ಶಿಷ್ಯ, ಹರಿಶ್ಚಂದ್ರನನ್ನು ಹಿಂಸಿಸಲು ರೂಪಿಸಿಕೊಂ
ಆಯುಧವಾಗಿದ್ದ ನಕ್ಷತ್ರಕನ "ನೆಲವಿಲ್ಲದೆಯೆ ನರರ ಪೀಡೆಯೊಳ
ನಲಿವುದನು ಕಲಿಯೆ, ಧ್ಯೇಯವೊಂದಿಲ್ಲದೆಯೆ ಮರುಕ ಸೋಂಕ
ಕ್ರೌರ್ಯವನು ತಿಳಿಯೆ ಎಳೆತಂದಿರೇಕೆ? ನನ್ನ ಪ್ರಕೃತಿಯ ತಳ
ಮುಟ್ಟಿಹೆನು ಕಜ್ಜದಿ; ಇನ್ನಿಳಿಯಲೆಡೆಯಿಲ್ಲ. ಮೃಗಕು ಮೃಗನಾಗಿಹೆ ಕನಿಕರ
ಪಾತ್ರನಾ,ಕ್ರೋಧಕಲ್ಲ" ಎನ್ನುವ ಮಾತುಗಳ ಹಿಂದೆ ಪಶ್ಚಾತ್ತಾಪವಿದ
ಆತ್ಮನಿಂದೆಯಿದೆ ಆತ್ಮಪತನದ ನೋವಿದೆ. ಈ ಮಾತುಗಳ
ವಿಶ್ವಾಮಿತ್ರನಿಗೂ ಅನ್ವಯವಾಗುವಂತಿದೆ.

ಆದರೆ ವಿಶ್ವಾಮಿತ್ರನಿಗೆ, ಹರಿಶ್ಚಂದ್ರನ ಧೀರನಿಷ್ಠೆ, ಸತ್ಯದ ಛಲ
ಹಿರಿದಾಗುತ್ತಿದ್ದಂತೆ, ಇನ್ನಷ್ಟು ಅವನನ್ನು ಪರೀಕ್ಷಿಸಬೇಕೆನಿಸುತ್ತದೆ. ಸಾಮಾನ್
ಮಾನವರಾದಲ್ಲಿ ಎಲ್ಲ ಧೈರ್ಯ, ಸಾಹಸಗಳನ್ನು ಚೆಲ್ಲಿಕೊಟ್ಟು ಸುಲಭದಲ್ಲಿ
ಸೋಲೊಪ್ಪಿಕೊಳ್ಳುವರಾದರೂ ಹರಿಶ್ಚಂದ್ರ, ಪರೀಕ್ಷೆಗಳ ಬೆಂಕಿಯಲ್ಲಿ ಕರಗಿ
ಹೋಗದೆ ಗಟ್ಟಿ ಗೊಳ್ಳುತ್ತಾನೆ. ವಿಶ್ವಾಮಿತ್ರನಿಗೆ ಇದು ಮತ್ತೂ
ಪ್ರಚೋದನೆಯಾಗುತ್ತದೆ. ಅಲ್ಪರ ಜೊತೆ ಸೆಣಸಾಟಕ್ಕಿಂತಲೂ,
ಮೌಲ್ಯಾಭಿಕಾಂಕ್ಷಿಯಾದ ತನಗೆ ಸತ್ವಶಾಲಿಗಳ, ನಿಸ್ವಾರ್ಥಿಗಳ ಜೊತೆಯ
ಹೋರಾಟ ಅರ್ಥ ಪೂರ್ಣ ಮತ್ತು ಉಪಯುಕ್ತವೆನಿಸುತ್ತದೆ. ಜೀವನದ
ಪರಮಮೌಲ್ಯ ಸಾಕ್ಷಾತ್ಕಾರಕ್ಕಾಗಿ ಮತ್ತು ಸ್ವಬೋಧಕ್ಕಾಗಿ, ಹರಿಶ್ಚಂದ್ರನ
'ಶೋಧದೆಸಕ' ಅನಿವಾರ್ಯವೆನಿಸುತ್ತದೆ.

ಮನುಷ್ಯ ಜೀವನವನ್ನು ಬಳಸಿರುವ ಶುಭಾಶುಭ ಶಕ್ತಿಗಳಲ್ಲಿ
ಅಶುಭವೆನ್ನುವುದರಲ್ಲಿ ಶುಭವೂ ಶುಭವೆನ್ನುವುದರಲ್ಲಿ ಅಶುಭವೂ

ಅಂತರ್ಗತವಾಗಿರುತ್ತವೆ. ಮನುಷ್ಯ ಚೇತನದ ವಿಕಾಸದ ಪ್ರಕ್ರಿಯೆಯಲ್ಲಿ ಅನೇಕ ಸಂದರ್ಭಗಳಲ್ಲಿ ದ್ವಂದ್ವಗಳನ್ನು ಎದುರಿಸಬೇಕಾಗುತ್ತದೆ. "ಮನುಷ್ಯನಿಗೆ ತಾನು ಏನಾಗಿರಬೇಕೆಂಬ ಪ್ರಜ್ಞೆಯ ಜೊತೆಗೆ 'ಏನಾಗಿದ್ದೇನೆ' ಎನ್ನುವ ಅರಿವೂ ಸಾಧಾರಣ ಪ್ರಾಪ್ತಿಗಳಿಗೂ ಬದ್ಧನಾಗಿರುವಂತೆ ಮಾಡುತ್ತದೆ. ಮನುಷ್ಯನಿಗಿರುವ ಈ ದ್ವಿಮುಖತೆ" ಅಂತರ್ಘರ್ಷಣೆಯಲ್ಲಿ ಪರ್ಯಾವಸಾನವಾಗುತ್ತದೆ. ಇದನ್ನು 'ಅಲ್ಪಾಕಾಂಕ್ಷೆ' ಮತ್ತು 'ಮಹತ್ವಾಕಾಂಕ್ಷೆ' ಎಂದು ಪು.ತಿ.ನ. ಹೆಸರಿಸುತ್ತಾರೆ. ಹರಿಶ್ಚಂದ್ರನಲ್ಲಿ ಮನಮಂಥನ ಅನಿವಾರ್ಯವಾಗುತ್ತದೆ. 'ನರನಳಲು ತಾಳದೆಯೆ ಮೌಲ್ಯಗಳನುದ್ಧರಿಸ' ಎನ್ನುವ ತತ್ವಕ್ಕೆ ಬದ್ದನಾಗಿ, ಹರಶ್ಚಂದ್ರನ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಹಿಂಸಾ ವಿಧಾನಗಳು ಅನಿವಾರ್ಯ ಆಯುಧಗಳಾಗುತ್ತವೆ. 'ಸತ್ಯ' ವೆನ್ನುವುದು ಶಿವ, ಸುಂದರಗಳಂತೆ ಒಂದು ಮೌಲ್ಯ, ಇವು ಮೂರೂ ಒಟ್ಟಿಗೆ ಮೇಲ್ಮೈಸಿದಲ್ಲಿ 'ಪರಮಮೌಲ್ಯ' ಪ್ರಾಪ್ತಿ. ಇವು ಒಂದೊಂದೂ ಒಂದು ಮೌಲ್ಯವಾಗಿ ಪ್ರತ್ಯೇಕವಾಗಿ ಉಳಿಯದೆ ಹರಿಶ್ಚಂದ್ರನ ಸಂದರ್ಭದಲ್ಲಿ ಒಂದಕ್ಕೊಂದು ಪೂರಕವಾಗಿ ಬರುತ್ತದೆ. ಆದ್ದರಿಂದ ಹರಿಶ್ಚಂದ್ರನ ಛಲ, ಬರಿ ಛಲವೋ ಇಲ್ಲವೆ ಪರಮಾರ್ಥ ಶಿವಛಲಕೋ ಎನ್ನುವುದು ಸಾಬೀತಾಗಬೇಕು.

ಹರಿಶ್ಚಂದ್ರನ ಚಿತ್ತಮಥನಕ್ಕೆ ವಿಶ್ವಾಮಿತ್ರ ಬೆಂತರ, ಉಪಾಸಿಗಳ ಪಡೆಯನ್ನು ಆಹ್ವಾನಿಸಿ, ಕೆಲಸಕ್ಕೆ ಹಚ್ಚುತ್ತಾನೆ. ಉಪಾಸಿಗಳೂ ಬೆಂತರಗಳು ಹರಿಶ್ಚಂದ್ರನನ್ನು ಹಿಂಸೆ, ಬೆದರಿಕೆಗಳಿಂದ, ಆಮಿಷಗಳಿಂದ ಅಧೀರಗೊಳಿಸಿ ಸೋಲಿಸಲು ಟೊಂಕ ಕಟ್ಟಿ ನಿಲ್ಲುತ್ತವೆ. "ಸುಡುಗಾಡನಿದ ಕಾಯ್ವ ದೊರೆನಿಮಗೆ ತಕ್ಕಹಗೆ....... ಇಂದುವರೆಗಿಳೆಯೊಳಗೆ ವಚನ ಪಾಲನವೆಂಬ ಬೆಳೆಗೆ ತನ್ನೆಲ್ಲವನು ತೆತ್ತನಾವನು ಹುಂಬ ? ಸಮಯ ಸಂದರ್ಭದೊಳು ದೇವರೇ ಮಾತುಗೆಡೆ ಈ ಮರ್ತ್ಯನೊಳಗೆಂತು ಸತ್ಯ ವಚನಕ್ಕೆಡೆ ?" - ಎಂದು ತಿಳಿಸಿ, ಹರಿಶ್ಚಂದ್ರನ ವಚನ ಭ್ರಷ್ಟತೆಗೆ ಪ್ರಚೋದಿಸುತ್ತಾನೆ. ಮದ್ಯೋಪಾಸಿಗಳು ಆಮಿಷಗಳೊಡ್ಡಿ ದಿಕ್ಕುತಪ್ಪಿಸಲು ಯತ್ನಿಸುತ್ತಾರೆ. ಪರಸ್ಪರ ವಿರೋಧಿಗಳಂತಿರುವ ಈ ಶಿವ-ಅಶಿವ, ಶುಭ-ಅಶುಭ ಶಕ್ತಿಗಳೆರಡೂ ನಡೆಸುವ ಪ್ರಯತ್ನಗಳ ಹಿಂದಿನ ಉದ್ದೇಶ ಒಂದೇ; ಅದೆಂದರೆ ಹರಿಶ್ಚಂದ್ರನನ್ನು ವಿಚಲಿತಗೊಳಿಸುವುದು. ವಚನ ಪಾಲನೆಯನ್ನು

ಮುರಿಯುವಂತೆ ಮಾಡುವುದು, ರೋಹಿತಾಶ್ವನ ಮರಣ, ಚಂದ್ರಮತಿಯ ಮೇಲೆ ಕೊಲೆಯ ಆರೋಪ, ಇವೆಲ್ಲ ಬೆಂತರಗಳು ತಂದೊಡ್ಡಿದ ಅನಿಷ್ಟಗಳು. ಉಪಾಸಿಗಳಾದರೋ ಆ ಬೆಂತರಗಳಿಂದಾಗುವ ಅಶುಭವನ್ನು, ಪೀಡೆಗಳನ್ನು ತಪ್ಪಿಸಲು ಜಪ, ತಪ ಯಾಗ ಮಾಡುತ್ತಾರೆ. ಅಶಿವದ ನಿವಾರಣೆಗೆ ರಚಿಸಬೇಕಾದ ಕಲ್ಪಕ್ಕೆ ಅರ್ಪಿಸಲು, ಹರಿಶ್ಚಂದ್ರನ ತ್ಯಾಗ, ದಾನ, ಧರ್ಮ ಬುದ್ಧಿಗಳನ್ನುಹೊಗಳಿ ಹೆಣದಕ್ಕಿಯನ್ನು ಬೇಡುತ್ತಾರೆ. ಆದರೆ ಸತ್ಯಕ್ಕಾಗಿ ದುಡಿದು ಬದುಕುವ ಹರಿಶ್ಚಂದ್ರನಿಗೆ ಶುಭದ ಆಮಿಷಕ್ಕಾಗಿ, ಒಡೆಯನಿಗೆ ಹುಸಿನುಡಿವುದು ಸಾಧ್ಯವಿಲ್ಲ; ತ್ಯಾಗ, ಚಾಗದಹಂಕಾರದಿಂದ ಪ್ರಚೋದಿತನಾಗಿ ಇದ್ದುದೆಲ್ಲವ ಕೊಟ್ಟು, ಇನ್ನೂ ಕೊಡ ಬೇಕಾದ್ದಕ್ಕೆ ಋಣಬಿದ್ದು, ಅದನ್ನು ತೀರಸಲು ಸತಿಸುತರನ್ನೇ ಮಾರಿ ತನ್ನನ್ನೂ ಚಂಡಾಲನಿಗೆ ಮಾರಿಕೊಂಡು ಕೈಚೆಲ್ಲಿ ಕುಳಿತಿರುವ ತನ್ನಲ್ಲಿ ಈಗ ಉಳಿದಿರುವುದು ಸತ್ಯ ನಿಷ್ಠೆಯೊಂದೆ. ಎಡರುಗಳು ಹೆಚ್ಚಿದಂತೆ 'ಸತ್ಯದ ಛಲ' ಬಲಗೊಳ್ಳುತ್ತಾ ಹೋಗುತ್ತದೆ. ಜೀವನದಲ್ಲಿ ಈ ವಿಪರೀತ ಸ್ಥಿತಿಗೆ ಬಲವತ್ತರ ಕಾರಣವಾವುದೋ ಇದೆ. ತನ್ನನ್ನು ಸುತ್ತಿ ಮುತ್ತಿ ಕಾಡುತ್ತಿರುವ ಕಷ್ಟಗಳು ಧರ್ಮದ ಗುಟ್ಟೊಂದನ್ನು ಬಿಚ್ಚುತ್ತಿರುವಂತೆ ಭಾವಿಸಿದ ಹರಿಶ್ಚಂದ್ರನ ನೈತಿಕಬಲವೇ ಅವನನ್ನು ಅನೇಕ ಸಂಕೀರ್ಣ ಸ್ಥಿತಿಗಳಿಂದ ಮೇಲೇರಿಸಿದೆ. ಏರುವ ಪ್ರಯತ್ನದಲ್ಲಿ ಬೀಳುವ ಸಂಭವಗಳೂ ಇದ್ದೇ ಇರುತ್ತದೆ. ಎನ್ನುವ ವಸ್ತು ಸ್ಥಿತಿಯ ಪ್ರಜ್ಞೆಯೇ, ಆಮಿಷಗಳ ರೂಪದಲ್ಲಿ ಬಂದು ಬೀಳುವ ಸಂದರ್ಭಗಳಿಂದ ರಕ್ಷಿಸುತ್ತದೆ.

ಇಷ್ಟಾದರೂ ವಿಶ್ವಾಮಿತ್ರನಿಗೆ ಹರಿಶ್ಚಂದ್ರನ ಅಂತಃ ಶಕ್ತಿಯ ಪೂರ್ಣಕಲ್ಪನೆ ಇಲ್ಲವಾಗಿ ಇನ್ನಷ್ಟು ಪರೀಕ್ಷೆಗೆ ಮುಂದಾಗುತ್ತಾನೆ. ಹೃದಯ ಕಲಕುವಂತಹ, ಅಧೀರಗೊಳಿಸುವಂತಹ ಸನ್ನಿವೇಶಗಳನ್ನು ಸೃಜಿಸುತ್ತಾನೆ. ರುದ್ರೋಪಾಸಿಗಳು ಸುಲಭಕ್ಕೆ ಸೋಲದೆ ಅವನನ್ನು ಮತ್ತಷ್ಟು ಮಥಿಸುತ್ತಾರೆ; ಅಭೌತ ಲೋಕವನಲೆವ ಶಿವ-ಅಶಿವ ಪ್ರೇರಕ ಶಕ್ತಿಗಳು ಅವನೆಡೆಯೇ ಕೇಂದ್ರೀಕರಿಸಿವೆಯೆಂದೂ ಅವನ ಸತ್ಯ ವ್ರತವನ್ನೇ ಪಣವಾಗಿಸಿ ಬಂದಿವೆಯೆಂದೂ ಬೆದರಿಕೆಯ ನುಡಿ ನುಡಿಯುತ್ತಾರೆ.

ಎಷ್ಟೇ ಸತ್ಯವ್ರತ ನಾದರೂ ಮೂಲತಃ ಮನುಷ್ಯ ತೀರಾ

ಸಂಕೀರ್ಣ, ದಾರುಣ, ಅಸಹಾಯಕ ಕ್ಷಣಗಳಲ್ಲಿ ವಿಚಲಿತನಾಗುವುದು ಸಹಜ. ಹರಿಶ್ಚಂದ್ರನೂ ಇದಕ್ಕೆ ಹೊರತಲ್ಲ, ಸತ್ತುಬಿದ್ದವನು ಮಗನೆಂದು ತಿಳಿದಾಗ, ತಂದವಳು ಹೆಂಡತಿಯೆಂದು ಅರಿತಾಗ ಸಂಯಮಸಡಿಲುತ್ತದೆ. ಹತ್ತಿಕ್ಕಿಕೊಂಡಿದ್ದ ಅಳಲು ಕೋಡಿವರಿದು ಹರಿಯುತ್ತದೆ. ಸ್ವಲ್ಪ ಹೊತ್ತಿಗೆ ಮುಂಚೆ ನಿಜವಾದ ಬದುಕಿನ ಸ್ವರೂಪ ವಿಶ್ಲೇಷಣೆಗೆ ತೊಡಗಿದ್ದ ಉಪಾಸಿಗಳ ಮಾತು ವಿಚಾರಣೀಯವಾಗುತ್ತದೆ. ಬದುಕು ತನ್ನ ಸಮಗ್ರತೆಯೊಳಗೆ ಒಳಿತು ಕೆಡುಕು, ಧರ್ಮ, ಅಧರ್ಮ, ವಿಷ-ಅಮೃತ, ಬೇಕು-ಬೇಡಗಳೆಂಬ ದ್ವಂದ್ವಗಳನ್ನು ಒಳಗೊಂಡಿರುತ್ತದೆ. "ಧರ್ಮ ಅಧರ್ಮದ ದೋಹಳವಿಲ್ಲದೆ ಹುಲುಸುವುದೆ, ದ್ವಂದ್ವವಿರದ ಬದುಕಿಲ್ಲವು ಶಿವನಿರ್ಮಿತ ಜಗದೆ" -ಎನ್ನುವ ಉಪಾಸಿಗಳ ಮಾತು ನೆನಪಾಗುತ್ತದೆ. ಕೆಡುಕಿನಲ್ಲಿ ಒಳಿತು, ಒಳಿತಿನಲ್ಲಿ ಕೆಡುಕು ಹುದುಗಿದ್ದು, ಶುದ್ಧ ಒಳಿತು, ಶುದ್ಧ ಕೆಡುಕು, ಎಂಬುದು ಸ್ವತಂತ್ರವಾಗಿ ಉಳಿದಿರಲು ಸಾಧ್ಯವಿಲ್ಲ, ಕೃತ್ಯಾ-ಕೃತ್ಯ ವಿವೇಚನೆ ಮನುಷ್ಯ-ಮನುಷ್ಯನಿಂದ ಬೇರೆಯಾಗುತ್ತದೆ. ಮನುಷ್ಯ ಪ್ರಯತ್ನಗಳೇನೇ ಇದ್ದರೂ ಒಳಿತು ಕೆಡುಕನ್ನು ನಿರ್ಣಯಿಸುವ ಹಕ್ಕು ಅವನಿಗಿಲ್ಲ. ಬದುಕಿನ ಪರಿಪೂರ್ಣತೆಯ ನಿಜವಾದ ಅರ್ಥ ತಿಳಿದಾಗ,

"ಮೇಧ್ಯಾ ಮೇಧ್ಯದ ನಡುಗಡೆ ನಡೆಯುತ್ತಿದೆ ಪ್ರಾಣ
ಚಿಂತ್ಯಾ ಚಿಂತ್ಯದ ಮಧ್ಯದೊಳಾಡುತ್ತಿದೆ ಜ್ಞಾನ
ಸಹ್ಯಾ ಸಹ್ಯಗಳೊಳಗೆಯೆ ರಸದುಗಮ ಸ್ಥಾನ
ಧರ್ಮಾ ಧರ್ಮಾಗಳಂತರದೊಳೆ ಕ್ಷೇಮೋತ್ಥಾನ"

-(ಸತ್ಯಾಯನ ಹರಿಶ್ಚಂದ್ರ ಪು-64)

-ಎನ್ನುವ ನಂಬಿಕೆಗೆ ಹೊಂದಿಕೊಳ್ಳಲೇಬೇಕಾದ ಅನಿವಾರ್ಯತೆಯ ಅನುಭವವಾಗುತ್ತದೆ. ದ್ವಂದ್ವಾತೀತ ನೆಲೆಯ ಬದುಕು ಕಲ್ಪನೆಗೂ ಸಾಧ್ಯವಿಲ್ಲವೆನಿಸುತ್ತದೆ. ಸತ್ಯದ ಛಲಕ್ಕೆ ಪಡೆದು ಕೊಂಡದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚುಎನಿಸಿದಾಗ ಉಪಾಸಿಗಳು ಹೇಳಿದ "ನುಡಿದಂದಿದ ನಡೆವಿಚ್ಛೆಗೆ ತುಸ ವಂಚನೆ ಬೆರಸದೆ" ನುಡಿದುದ ನಡಿಸುವ ಛಲಗೊಂಡೀ ದುರ್ಗತಿಗಿಳಿದೆ ಎಂಬ ಮಾತಿಗೆ, ಮೊದಲಿದ್ದ ದೃಢತೆ ಸಡಿಲಾಗಿ, ಶಿವನೆಲೆ ತಲುಪುವವರೆಗೆನ್ನಯ ಬೆಂಬಳಿಗೆ ದೈವದ ಕಾಪಿನ ತೆರದೊಳಿದ್ದು

ರಕ್ಷಿಸಬೇಕೆಂದು ಬೇಡಿದವನು, ಪುತ್ರಮೋಹಕ್ಕೆ ಬಲಿಬಿದ್ದು ಉಪಾಸಿಗಳೊಡ್ಡಿಗ ಪುತ್ರನ ಪ್ರಾಣದಾನದ ಆಮಿಷಕ್ಕೆ ಒಳಗಾಗುತ್ತಾನೆ, ಸತ್ಯನಿಷ್ಠೆಯಿಂದ ಬನ್ನಗಳಲ್ಲದೆ ಬೇರೇನೂ ಸಾಧಿಸಲಾಗದಿದ್ದಾಗ ಮಗುವಿನ ಮಮತೆಗೆ ಒಂದಿಷ್ಟು ವಂಚನೆಗೈದರೆ ಅಪರಾಧವಾಗಲಾರದೆನ್ನುವ ಅಭಿಪ್ರಾಯಕ್ಕೆ ಬರುವಷ್ಟರಲ್ಲಿ ಮಡದಿ ಚಂದ್ರಮತಿಯ ಉಪಸ್ಥಿತ ಪ್ರಜ್ಞೆ ಹರಿಶ್ಚಂದ್ರನ ಪತನವನ್ನು ತಡೆಗಟ್ಟುತ್ತದೆ. ದುಃಖಾಗ್ನಿಯಿಂದ ಬೆಂದು ಮೆದುವಾದ ಹರಿಶ್ಚಂದ್ರನ ಮನಸ್ಸಿನ ದುರ್ಬಲತೆಯ ದುರ್ಲಾಭಕ್ಕೆ ಉಪಾಸಿಗಳು ಮುಂದಾಗುತ್ತಾರೆ 'ನನ್ನಿಯ ಸೊಕ್ಕು' ಬಿಡಬೇಕು; ವಿಶ್ವಾಮಿತ್ರನಿಗೆ ಕೊಟ್ಟುದರಲ್ಲಿ ಅತ್ಯಲ್ಪಭಾಗವನ್ನು ತಮಗೆ ನೀಡಲು ಸಾಧ್ಯವಾದರೆ, ನಿಮಿಷ ಮಾತ್ರದಲ್ಲಿ ಮಗನುಳಿದೇಳುತ್ತಾನೆ, ಪುತ್ರ ವ್ಯಾಮೋಹ, ಅವರ ಸಲಹೆಯನ್ನು ಇನಿದಾಗಿಸುತ್ತದೆ. ಆದರೆ ಇಲ್ಲಿಯವರೆಗೆ ಸತ್ಯಕ್ಕಾಗಿ ಪಟ್ಟಪಾಡೆಲ್ಲವೂ ಮಗನ ಮೇಲಿನ ಮಮತೆಗೆ ಚೆಲ್ಲಿಕೊಡುವುದು ಬೇಡ. ನಿಷ್ಠೆಯಲ್ಲಿಯೆ ಉಳಿದು ಮಗನ ಸದ್ಗತಿಗೆ ದಾರಿ ಯೋಚಿಸಬೇಕೇ ಹೊರತು ಹಾದು ಬಂದ ಹಾದಿ ಬಿಟ್ಟು ಹಿಂದೆ ಹೋಗುವುದು ಸರಿಯಲ್ಲವೆಂಬ ವಿವೇಕದ, ಎಚ್ಚರಿಕೆಯ ಮಾತು ಹರಿಶ್ಚಂದ್ರನ ಆತ್ಮ ಪತನವನ್ನು ತಡೆಗಟ್ಟುತ್ತದೆ.

ಅವರ ಈ ದ್ವಂದ್ವ ಸ್ಥಿತಿಗೆ, ಅವನನ್ನು ಮುತ್ತಿರುವ ಶಿವ-ಅಶಿವ ಶಕ್ತಿಗಳು ಕಾರಣವಾಗುತ್ತವೆ. ಇವುಗಳನ್ನು ದಾಟಿ ಮೀರಿ ನಿಂತಾಗಲೆ ಶಿವನಿಧಿಗೆ ಹಕ್ಕುದಾರನಾಗುತ್ತಾನೆ.

ಮನುಷ್ಯ ಬದುಕನ್ನು ಮುತ್ತಿರುವ ಶಿವಾಶಿವ ಶಕ್ತಿಗಳು ಸುಲಭವಾಗಿ ಬಿಡದೆ ಹೆಜ್ಜೆ ಹೆಜ್ಜೆಗೂ ದಾರಿ ತಪ್ಪಿಸಿ ಸಂಪೂರ್ಣವಾಗಿ ತಮ್ಮ ವಶವಾಗುವಂತೆ ಮಾಡುತ್ತವೆ. ಸಾಮಾನ್ಯದ್ವಂದ್ವ ಬದುಕಿನಲ್ಲಿ ಇವುಗಳ ಉಪಟಳವಿಲ್ಲ, ಆದರೆ ಮನುಷ್ಯ ಜೀವನದ ಶ್ರೇಷ್ಠ ಮೌಲ್ಯಗಳಲ್ಲಿ ಶ್ರದ್ಧೆಯಿಡಲು ಆರಂಭಿಸಿದರೆ, ಇದ್ದಕ್ಕಿದ್ದಂತೆ ಅಶಿವ ಶಕ್ತಿಗಳ ಹಾರಾಟ ಚೀರಾಟಗಳು ಪ್ರಾರಂಭವಾಗುತ್ತವೆ. ಹರಿಶ್ಚಂದ್ರ ರಾಜನಾಗಿ, ಪಾಪ-ಪುಣ್ಯ ಧರ್ಮ-ಅಧರ್ಮ ಕೃತ್ಯ-ಅಕೃತ್ಯ ಇತ್ಯಾದಿಗಳ ಸಮನ್ವಯದೊಂದಿಗೆ ಇರುವವರೆಗೂ, ಸುಮ್ಮನಿದ್ದ ಅಶಿವ ಶಕ್ತಿಗಳು, ಸತ್ಯ, ತ್ಯಾಗ, ನಿಷ್ಠೆ

ಇತ್ಯಾದಿಗಳ ಕಡೆ ಹೊರಳಿ ಪ್ರಾಮುಖ್ಯತೆಯನ್ನು ಇತ್ತ ಕೂಡಲೇ, ಸಿಡಿದೆದ್ದು ಪ್ರತಿಭಟನೆಗೆ ತೊಡಗಿದ್ದರಿಂದಲೇ ಹರಿಶ್ಚಂದ್ರನಿಗೆ ಕಷ್ಟ ಪರಂಪರೆ ಎದುರಾಗುತ್ತದೆ.

'ಸುತಮೋಹ' 'ಸತಿಮೋಹ'ಗಳನ್ನುಂಟು ಮಾಡಿ ಮತ್ತೆ ಪೂರ್ವಸ್ಥಿತಿಗೆ ತರುವ ಹವಣಿಕೆಯಲ್ಲಿ ಮಗನ ಸಾವು, ಮಡದಿಯ ಕೊಲೆ ಸಂದರ್ಭಗಳನ್ನು ಸೃಷ್ಟಿಸುತ್ತವೆ. ಅವನ ಸತ್ವ ಪರೀಕ್ಷೆಗೆ ಮತ್ತಷ್ಟು ಕ್ರೂರವಾಗಿ ಹವಣಿಸುತ್ತವೆ. ಏನಂ ಗೆಲುವನೋ ನೋಡುವ ಈ ಸತ್ಯ ಸಮರ್ಥ ಎನ್ನುವ ಅವರ ಆಹ್ವಾನವನ್ನು ಎದೆಗೆಡದೆ ಸ್ವೀಕರಿಸುತ್ತಾನೆ; 'ನನ್ನಿಗಾಗಿ ಇಳೆಯಕೊಟ್ಟೆಸಿರಿಯಕೊಟ್ಟೆ ಮದವಬಿಟ್ಟೆ ಇಂದು ತೆರುವೆನೆನ್ನ ಸತಿಯ' ಎಂದು ಕರ್ತವ್ಯಕ್ಕೆ ಮುಂದಾಗುತ್ತಾನೆ.

ಶುಭಾಶುಭಗಳನ್ನು ದಾಟಿನಿಂತ ಆತ್ಮ ಸಾಧಕನಾದ ಹರಿಶ್ಚಂದ್ರನಿಂದ ಮಾನವಕುಲವೇ ಉದ್ಧಾರವಾಗಿ 'ಶಿವ' ಮೌಲ್ಯದ ಸಂಸ್ಥಾಪನೆಯಾಗುತ್ತದೆ. ಇಡೀ ನಾಟಕ, ಮುಖಾಮುಖಿಯಾಗುವ ಎರಡು 'ಅಹಂ'ಗಳ ಮೇಲೆ ನಿಂತಿದೆ, ಏನೇ ಆದರೂ 'ಸತ್ಯ'ವನ್ನು ಬಿಡೆನೆಂಬ ಛಲದ 'ಅಹಂ' ಒಂದೆಡೆಯಾದರೆ, ಹೇಗಾದರೂ ಸತ್ಯ ಭ್ರಷ್ಟನನ್ನಾಗಿಸಬೇಕೆಂಬ ಛಲದ 'ಅಹಂ'ಮತ್ತೊಂದೆಡೆ ಒಂದು ಧನಾತ್ಮಕ ಮೌಲ್ಯಾಧಾರಿತವಾದರೆ ಮತ್ತೊಂದು ಋಣಾತ್ಮಕ ಮೌಲ್ಯದ್ದು. ಒಂದು ರಚನಾತ್ಮಕವಾದರೆ ಮತ್ತೊಂದು ವಿನಾಶಕಾರಿ, ವಿಘ್ನಕಾರಿ

ವೈಜ್ಞಾನಿಕ ಲೆಕ್ಕಾಚಾರದ ರೀತಿಯಲ್ಲಿ +ve ಮತ್ತು -veಗಳು ಒಟ್ಟಿಗೆ ಸೇರಿ +ve ಆದ ಪರಿಣಾಮಕ್ಕೆ ದಾರಿಮಾಡುವಂತೆ, ಈ ಎರಡೂ 'ಅಹಂ' ಘರ್ಷಣೆಯಿಂದ, ಮತ್ತು ಈ ಘರ್ಷಣೆಯಲ್ಲಿ ಪಾಲುಗೊಳ್ಳುವ ಶಿವ-ಅಶಿವ ಶಕ್ತಿಗಳಾದ ಉಪಾಸಿಗಳು ಬೆಂತರಗಳ್ಳು ವಿಭಿನ್ನ ರೀತಿಯಲ್ಲಿ 'ಹರಿಶ್ಚಂದ್ರ'ನನ್ನು ಅಗ್ನಿ ದಿವ್ಯಗಳಾಗಿರುವ ಕಷ್ಟಗಳನ್ನು, ಅಡ್ಡಿಗಳನ್ನು ಸೃಷ್ಟಿಸಿ, ಅಧೀರನಾಗಿ ಸಲು ಪ್ರಯತ್ನಿಸಿ, ಸೋತು, 'ಮಂಗಳ ಮೌಲ್ಯದ ಪ್ರಸವಕ್ಕೆ, ಉದ್ಭವಕ್ಕೆ ಕಾರಣರಾಗುತ್ತಾರೆ.

ಇಂತಹ 'ಅಹಂ'ಗಳ ಘರ್ಷಣೆಯೊಂದಿಗೇ ಹಂತ ಹಂತವಾಗಿ ಮನುಷ್ಯ ಸಹಜವಾದ ದೌರ್ಬಲ್ಯದ ಕಾಳಿಕೆ ಕಳೆದು ಕೊಂಡು ಹರಿಶ್ಚಂದ್ರ,

ವಿಶ್ವಾಮಿತ್ರರಿಬ್ಬರೂ ಆತ್ಮವಿಕಾಸದ ಲಾಭ ಪಡೆಯುತ್ತಾರೆ, ವಿಶ್ವಾಮಿತ್ರನಲ್ಲಿದ್ದ ಛಲ ಮರುಕವಾಗಿ ಮಾರ್ಪಟ್ಟು, ಹರಿಶ್ಚಂದ್ರನ ಸತ್ಯ ಸತ್ವಶೋಧ ಆತ್ಮ ಪರೀಕ್ಷೆಗಳು ತನ್ನನ್ನೂ ಆತ್ಮಶೋಧಕ್ಕೆ ಹಚ್ಚುವುದರಿಂದ ವಸಿಷ್ಠರ ಮೇಲಿನ ದ್ವೇಷ, ಛಲಗಳು ಕರಗಿ "ನಾನೆನ್ನರಿತು ನಾನೆಯರಿದೆನ್ನಾತ್ಮ ದೋಷವನು ಅರಿಯಿಪರಾರೈ ನೀ ಹೊರತು ಎಂದು ನುಡಿದು 'ಆತ್ಮನಯ'ವನ್ನು ಬೆಳೆಸಿಕೊಳ್ಳುತ್ತಾನೆ. ಹರಿಶ್ಚಂದ್ರನೇ, ತನ್ನನ್ನು ಒಡ್ಡಿಕೊಳ್ಳುತ್ತಲೇ ತನ್ನಾತ್ಮ ಶೋಧಕ್ಕೂ, ಆತ್ಮ ಪರಿಷ್ಕರಣಕ್ಕೂ ಕಾರಣನಾದುದನ್ನು ಮೆಚ್ಚಿ, ಮುಕ್ತ ಕಂಠದಿಂದ,"

"ಭಳಿರೇ ಋಷಿಗೂ ಮಿಗಿಲಾದೆ
ಎನ್ನ ಮನವನೂ ಋಜುಗೈದೆ
ಕುದುರಿತೆನ್ನ ವಿಶ್ವಾಸ ನರನೊಳು
ಛಲ ಮುರಿಯಿತು, ನಾ ಹಸನಾದೆ !"

-(ಸತ್ಯಾಯನ ಹರಿಶ್ಚಂದ್ರ ಪು-101)

-ಎಂದು ಹೊಗಳಿದ್ದೇ ಅಲ್ಲದೆ, ಮನುಷ್ಯ ಮಾತ್ರನಾದವನೂ ಕೂಡಾ ಮೌಲ್ಯಕ್ಕಾಗಿ ಎಂತಹ ತ್ಯಾಗ, ಬಲಿದಾನಗಳಿಗೂ ಸಿದ್ಧನಾಗಿ ನಿಲ್ಲುವ ಆತ್ಮ ಸ್ಥೈರ್ಯ, ಜಯಗಳಿಸುವ ಭರವಸೆ, 'ಹರಿಶ್ಚಂದ್ರ'ನ ನಿದರ್ಶನದ ಮೂಲಕ ಕಂಡುಕೊಳ್ಳುತ್ತಾನೆ.

'ಸತ್ಯಾಯನ ಹರಿಶ್ಚಂದ್ರ'ಮಾನವ ಚೇತನದ ವಿಕಾಸದ ಕತೆಯಾಗಿದೆ. ಆತ್ಮವಿಕಾಸದ ಅದಮ್ಯ ಆಕಾಂಕ್ಷೆಯನ್ನುಳ್ಳ ಚೇತನದ ಮುಂದೆ ಅದರ ನೈತಿಕ ಬಲದ ಮುಂದೆ,ಮೌಲ್ಯ ಶ್ರದ್ಧೆಯ ಮುಂದೆ ಯಾವ ಅಡ್ಡಿ ಆತಂಕಗಳು, ದುರಂತಗಳೂ ಎಷ್ಟೇ ಪ್ರಯತ್ನ ಪಟ್ಟರೂ ಸೋತು ಹಿಮ್ಮೆಟ್ಟುವುದರಲ್ಲಿ ಅನುಮಾನವಿಲ್ಲ.

ಇಲ್ಲಿನ ವಸ್ತು ಹಳೆಯದೇ ಆದರೂ ಅದನ್ನು ನಿರ್ವಹಿಸಿರುವ ರೀತಿ, ಅದರ ಹಿಂದಿನ 'ತಾತ್ವಿಕತೆ' ವಿಭಿನ್ನವೂ ವಿಶೇಷವೂ ಆಗಿದೆ. ರಾಘವಾಂಕನಿಗೆ ಸತ್ಯ, ಶಿವ, ಸುಂದರಗಳ ಸಮನ್ವಯ, ಸಾಕ್ಷಾತ್ಕಾರಗಳ ಹಿನ್ನೆಲೆಯಲ್ಲಿ ಹರಿಶ್ಚಂದ್ರನ ಕತೆ ಪ್ರಿಯವಾಗಿದೆ. ಹರಿಶ್ಚಂದ್ರ 'ಸತ್ಯ' ಮೌಲ್ಯದ ಪ್ರತೀಕವಾಗಿ ಕಾಣುತ್ತಾನೆ. 'ಸತ್ಯ'ದ ಮೂಲಕವೇ 'ಶಿವ'ಸಾಕ್ಷಾತ್ಕಾರದೆಡೆಗೆ

ಸಾಗುತ್ತಾನೆ. 'ಸತ್ಯ ಶಿವ'ಗಳು ಒಟ್ಟಿಗೆ 'ಸುಂದರ'ವನ್ನು ಒಳಗೊಂಡಿದೆ. ಸತ್ಯವಿರುವಲ್ಲಿ ಶಿವ, ಸತ್ಯ, ಶಿವಗಳಿರುವಲ್ಲಿ ಸೌಂದರ್ಯ, ಇವು ಮೂರು ಅನನ್ಯ ಮೌಲ್ಯಗಳು. ಅವನಿಗೆ ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರ, ಹರನ ಸಾಕ್ಷಾತ್ಕಾರ ಸತ್ಯದ ಸಾಕ್ಷಾತ್ಕಾರವೂ ಹೌದು.

ಪು.ತಿ.ನ. ಅವರು ಇನ್ನಷ್ಟು ಗಂಭೀರವಾಗಿ ಮಾನವನ 'ಆತ್ಮವಿಕಾಸ'ದ ಅಗತ್ಯ, ಅನಿವಾರ್ಯತೆಗಳನ್ನು ಪ್ರಾಪ್ತಿ, ಪರ್ಯಾಪ್ತತೆ, ಪ್ರಾಪ್ತಿ ಭೋಗ, ಭಾವ ಧರ್ಮಾಯನ, ಭೌತಧರ್ಮಾಯನ - ಇತ್ಯಾದಿ ಪರಿಕಲ್ಪನೆಗಳ ಮೂಲಕವಾಗಿ ವಿವರಿಸುತ್ತಾರೆ. ಯಾವುದೇ ಒಂದು ಚೇತನ 'ಪ್ರಾಪ್ತಿ ಭೋಗದಲ್ಲಿ' ಉಳಿಯಬಾರದು; ಭೋಗ ಮಿತಿಗಳಲ್ಲಿ ರಮಿಸುತ್ತದೆ, "ಭೋಗವೆಂದರೆ ಬಂಧನ" ಮಿತಿಯಲ್ಲಿನ ಅಮಿತ ಆಸಕ್ತಿ. ಆದ್ದರಿಂದ "ಅಲ್ಪಾತ್ಮರು, ಅನ್ಯಜನಾಂಗ, ಆತ್ಮಾಯನದ ಪಾಪ್ತಿಗಳಲ್ಲಿ ತಂಗಬಹುದೇ ಹೊರತು ಅವನ್ನು ತಮ್ಮ ಆತ್ಮದ ಋತ - ಸತ್ಯಾಯನಗಳಿಗೆ ಬಳಸಿಕೊಳ್ಳುವುದು ದುಸ್ಸಧ್ಯವೆಂದೇ ತೋರುತ್ತದೆ."

ಅಲ್ಪಾತ್ಮರು ಮಿತಿಗಳಲ್ಲಿ ಅಮಿತ ಭೋಗಾಸಕ್ತಿಯನ್ನು ತೋರಿಸಿ ಇದ್ದುದನ್ನೇ ಪುನಃ ಪುನಃ ಬಯಸಿ ಸುಖಾಪೇಕ್ಷಿಗಳಾಗುತ್ತಾರೆ. ಇಂತಹವರಿಂದ ಮನುಕುಲಕ್ಕೆ ಯಾವುದೇ ಪ್ರಯೋಜನವಿರಲಾರದು: ಎಂತಹ ಪ್ರಗತಿಯೂ ಸಾಧ್ಯವಾಗದು, ಆದರೆ ಹರಿಶ್ಚಂದ್ರ 'ಪ್ರಾಪ್ತಿಭೋಗ'ದಲ್ಲಿ ಉಳಿಯದೆ, ಭೋಗಮಿತಿಗಳಲ್ಲಿ ರಮಿಸದೆ, ತನ್ನ ಬದುಕಿನಲ್ಲಿ ಪರಮ ಮೌಲ್ಯವೆಂದು ನಂಬಿದ ಸತ್ಯದ ಸಾಕ್ಷಾತ್ಕಾರಕ್ಕೆ ಹೊರಡುತ್ತಾನೆ. ವಿಕಾಸದ ಹಾದಿಯಲ್ಲಿರುವ ಚೇತನಗಳ ಹಂಬಲ ಎಷ್ಟೇ ತೀವ್ರವಾಗಿದ್ದರೂ, ಆಧ್ಯಾತ್ಮಿಕ ಸಾಧಕನ ಸಾಧನೆಯ ದಿಕ್ಕು ತಪ್ಪಿಸಲು ಎಷ್ಟೆಲ್ಲ ಅಡ್ಡಿಗಳು ಒತ್ತಡಗಳು ಎದುರಾಗುತ್ತವೆಯೋ ಅಂತೆಯೇ ಇಲ್ಲಿಯೂ ದಿಕ್ಕು ತಪ್ಪಿಸುವ ಪ್ರಯತ್ನಗಳಾಗುತ್ತವೆ. ಇವುಗಳನ್ನು ದಾಟಿಬರುವುದು ಅಗ್ನಿ ದಿವ್ಯಗಳಾಗುತ್ತವೆ. ಮಾನವ ಸಹಜ ದೌರ್ಬಲ್ಯಗಳು ಕೆಲವೊಮ್ಮೆ ಮುತ್ತಿ ಮುಗ್ಗರಿಸುವಂತೆ ಮಾಡುತ್ತವೆ. ಆತ್ಮಿಕತೆ, ಭೌತಿಕತೆಯ ಸೆಳೆತಗಳ ನಡುವೆ ಸಿಕ್ಕು ಸಿಕ್ಕಾಗುತ್ತಾನೆ. ಆದರೆ ಆತ್ಮಶಾಲಿ ಅಥವಾ 'ಆತ್ಮ ಸತ್ವಯುತ'ನಾದವನು ಸುಲಭದಲಿ ಭೌತಿಕ ಪ್ರಲೋಭನೆಗಳಿಗೆ ಸಿಗದೆ,

ನೇರವಾಗಿ, ತಡವರಿಸಿದರೂ ಎಚ್ಚೆತ್ತುಕೊಂಡು ಸ್ಥಿರ ಮೌಲ್ಯದ, ಮಹಾಮೌಲ್ಯದ ಕಡೆಗೆ ಹೊರಡುತ್ತಾನೆ; ತಲುಪುತ್ತಾನೆ.

ಹರಿಶ್ಚಂದ್ರನಲ್ಲಿ ಉದಾರ ಮಾನವ ಗುಣವಾದ ಧರ್ಮ ಬುದ್ಧಿಯ ಹೊರತು ಋಷಿಯೋಗ್ಯವಾದ ತ್ಯಾಗ-ತಪವಿರಕ್ತಿಗಳು ಇರಲಿಲ್ಲ. ಆದರೆ ಅವುಗಳ ಸಾಧ್ಯತೆ ಅಂತಃ ಪ್ರವೃತ್ತಿಯಲ್ಲಿದ್ದು ಪ್ರಕಟವಾಗುವ ಅವಕಾಶವಿರಲಿಲ್ಲ, ವಿಶ್ವಾಮಿತ್ರ ಅವುಗಳನ್ನು ಗುರುತಿಸುವ ಅಂತರ್ದೃಷ್ಟಿ ಹೊಂದಿರಲಿಲ್ಲ, ವಸಿಷ್ಠರು ಅದನ್ನು ಗುರುತಿಸಿದ್ದರು, ಹರಿಶ್ಚಂದ್ರನ ಅಂತಃ ಸತ್ವ ಸಾಮರ್ಥ್ಯಗಳ ಬಗ್ಗೆ ವಸಿಷ್ಠರಿಗಿದ್ದ ನಂಬುಗೆಯ ಸತ್ಯಾಸತ್ಯ ಪರೀಕ್ಷೆಯ ಛಲದಿಂದ ವಿಶ್ವಾಮಿತ್ರ, ಹರಿಶ್ಚಂದ್ರನ ಬದುಕಿನಲ್ಲಿ ಪ್ರವೇಶಿಸಿ ಸ್ಥಿತ್ಯಂತರಗಳನ್ನು ತರುತ್ತಾನೆ. ಹರಿಶ್ಚಂದ್ರನನ್ನು ಕಾಡುವ ಕ್ರೂರವಿಧಿಯಾಗಿ ಪರಿಣಮಿಸುತ್ತಾನೆ. ಭೌತಾವರಣ ಕುಸಿಯುತ್ತಾ ನಡೆದಂತೆ ಭಾವಾವರಣ ವಿಸ್ತರಿಸುತ್ತಾ ನಡೆಯುತ್ತದೆ. ಕಷ್ಟಕಾರ್ಪಣ್ಯ, ಅಳಲು ಹಿರಿದಾದಂತೆ ಮೌಲ್ಯಭಿಕಾಂಕ್ಷೆ ಬಲಗೊಳ್ಳುತ್ತಾ ಹೋಗುತ್ತದೆ. 'ಶಿವ'ದ ನೆಲೆ ತಲುಪುವ ಛಲದ ಮುಂದೆ ಹಿಮಾಲಯ ಗಾತ್ರದ ಕಷ್ಟಗಳೂ ಕರಗಿ ನೀರಾಗುತ್ತದೆ. ಯಾವ ತಪಸ್ವಿಗೂ ಸಾಧ್ಯವಲ್ಲದ ತ್ಯಾಗ, ತಪ, ಸಂಯಮಗಳನ್ನು ರೂಢಿಸಿಕೊಂಡು ಮನೋವಿಕಾರಗಳನ್ನು ಮೆಟ್ಟಿ 'ಶುಭಾ ಶುಭ'ವೆಂಬ ದ್ವಂದ್ವ ಸ್ಥಿತಿಯನ್ನು ಮೀರಿ ಶಾಶ್ವತ ಶಿವ ಮೌಲ್ಯದ ಸ್ಥಾಪನೆಗೆ ಕಾರಣನಾಗುತ್ತಾನೆ. ಹರಿಶ್ಚಂದ್ರನನ್ನು ಈ ನೆಲೆಗೆ ತರಲು ಹೊರಗೆ ಕ್ರೂರಿಯೂ, ನಿಷ್ಠುರನೂ, ನಿರ್ದಯಿಯೂ ಆಗಿ ಕಾಣಿಸಿಕೊಂಡರೂ, ವಿಶ್ವಾಮಿತ್ರನೇ ಪರೋಕ್ಷವಾಗಿ ಕಾರಣನಾಗುತ್ತಾನೆ ಈತನು ಸಾಮಾನ್ಯನಲ್ಲ. ಮಿತಿಗಳಲ್ಲಿ ರಮಿಸಿ ಆತ್ಮಜಡತೆಯನ್ನು ಒಳಗೊಂಡು ಅಖಂಡ ಕಾಲ ಪ್ರವಾಹದಲ್ಲಿ ಅಜ್ಞಾತವಾಗಿ ಉಳಿದುಬಿಡಬಹುದಾಗಿದ್ದ ಹರಿಶ್ಚಂದ್ರನನ್ನು ಮೌಲ್ಯ ಪ್ರತೀಕವನ್ನಾಗಿಸಿದ ಶ್ರೇಯಸ್ಸು ವಿಶ್ವಾಮಿತ್ರನದು. ವಿಶ್ವಾಮಿತ್ರನಂತಹ ಮಹಾನುಭಾವರ ಸಹಕಾರ ಸಹಯೋಗಗಳಿಂದಲೇ ಧರ್ಮ ಪ್ರಗತಿ. ಬುದ್ಧ, ಏಸು, ಗಾಂಧಿಗಳಂತೆಯೇ ಇವನು, ಇಂಥವರಿಂದಲೇ ಮಹಾಭಾವೋದಯ; ಮೌಲ್ಯೋದಯ. ಆದರೆ ಇದಾಗುವ ಮುನ್ನ ನಡೆಯುವ ಘರ್ಷಣೆ ಭಯಂಕರ, ಅಸಹನೀಯ. ಬದುಕಿನ ವಿವಿಧ ಆಕರ್ಷಣೆಗಳ ಜೊತೆಗೆ ಸತ್ಯನಿಷ್ಠೆ ಮುಖಾಮುಖಿಯಾಗಿ ಸೆಣಸಾಡ

ಬೇಕಾಗುತ್ತದೆ. ಕರುಳ ಸಂಬಂಧಗಳು, ರಕ್ತ ಸಂಬಂಧಗಳು ಮೋಹಪಾಶಗಳಾಗಿ ಕಟ್ಟಿ ಬೀಳಿಸುವ ಅಪಾಯಗಳಿರುತ್ತವೆ. ಇದೆಲ್ಲದರಿಂದ, ಸೋಲುವ ಕ್ಷಣಗಳಲ್ಲಿಯೂ, ಮಡದಿಯೆಚ್ಚರ, ವಿವೇಕದ ನುಡಿಗಳು ರಕ್ಷಾಕವಚಗಳಾಗಿ ಒದಗಿಬಂದು ದಿವ್ಯ ಛಲ ಮತ್ತೊಮ್ಮೆ ಮರುಕಳಿಸಿ, ಭ್ರಷ್ಟತೆಯಿಂದ ಪಾರಾಗುತ್ತಾನೆ, ಹರಿಶ್ಚಂದ್ರ ಸೋತು ಗೆಲ್ಲುತ್ತಾನೆ; ವಿಶ್ವಾಮಿತ್ರಗೆದ್ದು ಸೋಲುತ್ತಾನೆ. ಅವನಲ್ಲಿನ ದೌರ್ಬಲ್ಯದ ಅರಿವುಂಟಾಗಿ ವಿಕಾಸದ ಪೂರ್ಣಾವಸ್ಥೆಯನ್ನು ಮುಟ್ಟುತ್ತಾನೆ. ವಸಿಷ್ಠ ವಿಶ್ವಾಮಿತ್ರರಂತಹ ಮಹಾತ್ಮರ, ಉದಾತ್ತರ ಹುರುಡಿನಿಂದ ಮಂಗಳ ಮೌಲ್ಯೋದಯ ವಾಗುತ್ತದೆ. ವಸಿಷ್ಠನೇ ಹರಿಶ್ಚಂದ್ರನ ಮೌಲ್ಯ ನಿಷ್ಠೆಯನ್ನು ಎತ್ತಿ ತೋರಿಸುವುದಕ್ಕಿಂತ ವಿಶ್ವಾಮಿತ್ರನ ಮೂಲಕವಾಗಿ ಅನಾವರಣವಾದದ್ದು ಅರ್ಥಪೂರ್ಣವೆನಿಸುತ್ತದೆ. ಮೌಲ್ಯಗಳು ಚಿರಂತನವಾದರೂ ಅವುಗಳ ಮೇಲೆ ಕವಿದಿರುವ ಅಜ್ಞಾನದ ಧೂಳಿನಿಂದ ಹೊರತೆಗೆದು ಪರಿಷ್ಕರಿಸಿ ಉದ್ಧರಿಸಬೇಕಾಗುತ್ತದೆ. ಧರ್ಮ ಸಂಸ್ಥಾಪನೆಗೆ ದೇವರ ಅವತಾರದ ಅನಿವಾರ್ಯತೆಯಿದ್ದಂತೆ, ಮೌಲ್ಯ ಸಂಸ್ಥಾಪನೆಗೆ ಮಹಾಚೇತನಗಳ ಅವತರಣವೂ ಬೇಕಾಗುತ್ತದೆ.

ಇಷ್ಟು ಗಂಭೀರವಾದ ವಿಚಾರಸರಣಿ, ತಾತ್ವಿಕತೆಯ ನಿರೂಪಣೆಗೆ ಗೀತನಾಟಕ ಮಾಧ್ಯಮವನ್ನು ಹೊಂದಿಸಿ ಕೊಂಡದ್ದು ನಿಜವಾಗಿಯೂ ಒಂದು ಬಹುದೊಡ್ಡಸವಾಲು, ಮೌಲ್ಯಗಳು, ಆತ್ಮವಿಕಾಸ, ಶಿವಾ-ಶಿವ ಶಕ್ತಿಗಳ ದ್ವಂದ್ವ ಸ್ವರೂಪ, ಬದುಕಿನಲ್ಲಿ ಅವುಗಳ ಪಾತ್ರ, -ಇತ್ಯಾದಿ ಗಂಭೀರ ವಿಷಯಗಳೂ ಕೂಡ ಸಾಮಾನ್ಯ ಅಭಿಪ್ರಾಯಕ್ಕಿಂತ ಭಿನ್ನವಾಗಿ, ಗೀತಸಂಭಾಷಣೆಗಳ ಮತ್ತು ಸ್ವಗತಗಳ ಮೂಲಕ ಅತ್ಯಂತ ಯಶಸ್ವಿಯಾಗಿ ನಿರೂಪಿತವಾಗಿದೆ. ಇಷ್ಟೊಂದು ಗಹನವಾದ ವಿಚಾರಗಳನ್ನು ಗದ್ಯ ಬರಹದಲ್ಲಿ ಹೇಳಬಹುದಾಗಿತ್ತು. ಆದರೆ ಅದಕ್ಕಿಂತ ಹಿತವಾದ, ಪ್ರಿತಿಯವಾದ ರೀತಿಯಲ್ಲಿ, ಪಾತ್ರ, ಸನ್ನಿವೇಶ, ಸಂದರ್ಭಗಳ ಮೂಲಕವಾಗಿ ಅಭಿವ್ಯಕ್ತವಾಗುವುದರಿಂದ ಕೃತಿಕಾರರ ತಾತ್ವಿಕ ಚಿಂತನೆಗಳ ಸಂವಹನ ವಾಗುತ್ತದೆ. ಅದರಲ್ಲೂ ಪರಿಚಿತವಾದ ಕಥಾನಕಗಳ ಮೂಲಕ ಕಟ್ಟಿಕೊಡುವ ತಾತ್ವಿಕತೆ, ದರ್ಶನಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತವೆ. ಕವಿತೆ ಯಲ್ಲಿನ ತಾತ್ವಿಕತೆಯನ್ನು ಒಂದು ಪ್ರತಿಮೆ, ಪ್ರತೀಕದ ಅರ್ಥ

ಗ್ರಹಿಕೆಯಿಂದ, ಓದುಗನ ಬೌದ್ಧಿಕ, ವೈಚಾರಿಕ ಸಾಮರ್ಥ್ಯದಿಂದ ದಕ್ಕಿಸಿಕೊಳ್ಳುವುದಕ್ಕೆ ಮಾತ್ರ ಸಾಧ್ಯವಾಗುತ್ತದೆ. ಗೀತ ನಾಟಕ ಅಥವಾ ಪು.ತಿ.ನ. ಅವರು ಕರೆದಂತೆ 'ಸತ್ಯಾಯನ ಹರಿಶ್ಚಂದ್ರ'ದಲ್ಲಿ ದೃಶ್ಯ ಸಹಯೋಗ, ಸಂಭಾಷಣಾಶೈಲಿ, ಅದರಲ್ಲಿನ ಗೀತಗುಣ-ಎಲ್ಲವೂ ಒಂದಕ್ಕೊಂದು ಪೂರಕವಾಗಿ ಪು.ತಿ.ನ. ಅವರ 'ದರ್ಶನ' 'ಚಿಂತನೆ' ಗಳನ್ನು ಪ್ರೇಕ್ಷಕರ ಗ್ರಹಿಕೆಗೆ ತಲುಪಿಸುವುದರಲ್ಲಿ ಅನುಕೂಲಿಸಿದೆ. ರಂಗದ ಮೇಲೆ ಇದರ ಪ್ರಯೋಗದ ಯಶಸ್ಸು ಏನೇ ಇದ್ದರೂ, ಗೀತನಾಟಕ ಅಥವಾ ಯಕ್ಷರೂಪಕವನ್ನು ತಮ್ಮ ವಿಚಾರಗಳ ಸಂವಹನಕ್ಕೆ ಸಮರ್ಥ ಮಾಧ್ಯಮವಾಗಿ ದುಡಿಸಿಕೊಂಡಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ, ಇಡೀ ನಾಟಕವೇ ಸಾಂಕೇತಿಕತೆಯ ನೆಲೆಯಲ್ಲಿದೆ. ಚೆಂತರಗಳು, ಉಪಾಸಿಗಳು ಹರಿಶ್ಚಂದ್ರನ ಜೀವನ ಸಂದರ್ಭದಲ್ಲಿ ಮಾತ್ರ ಕಾಣಿಸಿಕೊಳ್ಳುವಂಥವುಗಳಲ್ಲ, ಇವು ಮಾನವ ಜೀವನ, ಮಾನವ ಮನಸ್ಸುಗಳನ್ನು ಮುತ್ತಿರುವ ದ್ವಂದ್ವಭಾವಗಳನ್ನು ಸಂಕೇತಿಸುವುದರ ಜೊತೆಗೆ, ಜೀವನದ ಪರಮ ಮೌಲ್ಯ ಯಾವುದೆಂಬುದರ ಕಡೆಗೆ ನಿರ್ದೇಶ ನವೀಯುತ್ತವೆ. ಶಿವಾಶಿವವೆಂಬ ಈ ದ್ವಂದ್ವ ಶಕ್ತಿಗಳ ಹಿನ್ನೆಲೆಯಲ್ಲಿ ಮಾನವ ಜೀವನ ವಿಮರ್ಶೆಯನ್ನೇ ಮಾಡಿದ್ದಾರೆ, ಮೌಲ್ಯ ಮೀಮಾಂಸೆಯೇ ಈ ನಾಟಕದ ಕೇಂದ್ರ ಆಶಯವೆಂಬುದು ಇದರ ವಿಶ್ಲೇಷಣೆಯಿಂದ ಸ್ಪಷ್ಟವಾಗಿದೆ.

ಪು.ತಿ.ನ. ಅವರ ಚಿಂತನೆಗಳು ತಮ್ಮ ಗೀತನಾಟಕಗಳ ಅಂತರ್ನಿಹಿತ ವಿಷಯ, ಮೌಲ್ಯಗಳಿಗಷ್ಟೇ ಸೀಮಿತವಾಗುವುದಿಲ್ಲ, ಆಯ್ದುಕೊಳ್ಳುವ ವಸ್ತುವಿಗನುಗುಣವಾದ ನಿರೂಪಣಾ ಕ್ರಮ, ಅಥವಾ ಸಂವಿಧಾನ ಸ್ವರೂಪದ ಬಗ್ಗೆಯೂ ಚಿಂತನೆಗೆ ಹೊರಡುತ್ತಾರೆ. ಲಲಿತ, ಮಧುರ ಗಂಭೀರ ವಸ್ತುಗಳು (plots) ಬೇರೆ ಬೇರೆಯೇ ಆದ ಆಕೃತಿಯನ್ನು ಬಯಸುತ್ತವೆ ಎಂಬುದು ಪು.ತಿ.ನ. ಅವರ ನಂಬಿಕೆ. ಆದ್ದರಿಂದಲೇ 'ಸತ್ಯಾಯನ ಹರಿಶ್ಚಂದ್ರ'ದ ರೂಪಸಂಯೋಜನೆ, ಗೀತನಾಟಕ ಶೈಲಿ ಸ್ವಲ್ಪ ಬೇರೆಯೇ ಆಗಿದೆ. ಇಲ್ಲಿ ಲಲಿತ, ಮಧುರ, ತಾಳ, ಲಯ, ಬದ್ಧ ಗೇಯ ಬಂಧಗಳಿರದೆ, ಗಂಭೀರ ಮತ್ತು ನಿಧಾನಗತಿಯಲ್ಲಿ ಸಾಗುವ ಪದ್ಯ ಬಂಧಗಳಾಗಿವೆ. ಹುಟ್ಟುಸಾವು ಸ್ವರ್ಗ, ನರಕ, ಪಾಪ, ಪುಣ್ಯ, ಶುಭ, ಅಶುಭ, ಸತ್ಯ-ಶಿವ, ಸೌಂದರ್ಯ - ಇತ್ಯಾದಿ ಗಂಭೀರ ಪರಿಕಲ್ಪನೆಗಳ

ಅಥವಾ ಮೌಲ್ಯಾದರ್ಶಗಳ ಚಿಂತನೆಯೇ ಈ ಯಕ್ಷರೂಪಕದಲ್ಲಿ ಪ್ರಧಾನವಾಗಿದೆ. ವೃತ್ತಿ ರಂಗ ಭೂಮಿ, ಯಕ್ಷರಂಗಭೂಮಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮತ್ತು ಈ ಕಥೆಯ ಜನಪ್ರಿಯತೆಯನ್ನೂ ಗಮನಿಸಿ ರೂಪಬದಲಾವಣೆಗಾಗಲೀ, ಪ್ರಚಲಿತ ಕಥಾಧರೆಗಿಂತ ಭಿನ್ನವಾಗಿ ಕಥಾಂತರಗೊಳಿಸುವುದಕ್ಕಾಗಲಿ ಪ್ರಯತ್ನಿಸದೆ ಆದಷ್ಟೂ ಸಾಂಪ್ರದಾಯಿಕ ಸ್ವರೂಪವನ್ನೇ ಉಳಿಸಿಕೊಂಡಿದ್ದಾರೆ, ಈ ಸಂಬಂಧದಲ್ಲಿ ಪು.ತಿ.ನ ಅವರು ಹೇಳುವ ಮಾತುಗಳು ಗಮನಾರ್ಹವಾಗಿವೆ.. ಈ ನಾಟಕ ಕುರಿತು ತಮ್ಮ ಕೃತಿಯ ಮುನ್ನುಡಿ ಭಾಗದಲ್ಲಿ,

"ಉದ್ದಿಷ್ಟ ರಸೋದಯಕ್ಕಾಗಿ ಕಥಾವಸ್ತುವನ್ನೂ ರಚನಾ ತಂತ್ರವನ್ನೂ ಅದ್ಯಕಾಲೋಚಿತವಾಗಿ ವ್ಯತ್ಯಾಸಗೊಳಿಸುವ ಸ್ವಾತಂತ್ರ್ಯ ರಚನೆಗಾರನಿಗೆ ಇದ್ದೇ ಇದೆ. ಆದರೆ ಪುರಾತನ ಕಥೆಯನ್ನು ನವೀಕರಿಸುವುದರಲ್ಲಿ ಆತ ಒಂದು ಎಚ್ಚರಿಕೆಗೆ ಒಳಪಡಬೇಕಾಗುತ್ತದೆ......... ಏಕೆಂದರೆ, ಈ ಕತೆಗಳು (ಪುರಾತನ) ನಮ್ಮ ಸಾಂಸ್ಕೃತಿಕ ಸಂಪತ್ತಿಗೆ ಆಕರಗಳಾಗಿ ತಲೆಮಾರಿನಿಂದ ತಲೆಮಾರಿಗೆ ಎಲ್ಲೂ ತಂಗದೆ ಹರಿದು ಬರುವಂಥವು ನಮ್ಮ ಜನಾಂಗದ ಅಂತಃ ಕರಣದ ಮೂಲದ್ರವ್ಯಗಳಿವು. ಇವು ಮೈ ಪಡೆದು ಬದುಕುವುದು ಆವಶ್ಯಕ".

-ಎಂದು ಪ್ರಾಚೀನ, ಪುರಾಣ ವಸ್ತುಗಳನ್ನು ನವೀಕರಿಸುವ ಪ್ರಕ್ರಿಯೆಯ ಹಿಂದಿನ ಮನೋಭೂಮಿಕೆ ಹೇಗಿರಬೇಕೆಂಬುದನ್ನು ಸ್ಪಷ್ಟ ಪಡಿಸಿದರೆ, ಆಶಯಕ್ಕೆ ಅನುಗುಣವಾದ ಆಕೃತಿ, ಪ್ರಯೋಗ, ಪ್ರದರ್ಶನಗಳ ಬಗ್ಗೆಯೂ ಒಂದು ಸ್ಪಷ್ಟವಾದ ತಾತ್ವಿಕ ನೆಲೆಗಟ್ಟನ್ನು ರೂಡಿಸಿಕೊಂಡಿದ್ದಾರೆ. 'ಸತ್ಯಾಯನ ಹರಿಶ್ಚಂದ್ರ ಗೀತರೂಪಕವೋ ಯಕ್ಷರೂಪಕವೋ -ಓದುಗರು ಅದನ್ನು ಹೇಗೆ ಒಪ್ಪಿಕೊಂಡರೂ ಪು.ತಿ.ನ ಅವರು ಅದರ ಪ್ರಯೋಗದ ಬಗ್ಗೆ ಕೆಲವು ನಿರೀಕ್ಷೆಗಳನ್ನು ಇರಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ರಂಜನೀಯ ಭಾವುಕ ಪರಿಸರಕ್ಕಿಂತ ದಟ್ಟವಾದ ತಾತ್ವಿಕ ಚಿಂತನೆಯಿಂದ ಕೂಡಿದ ವಸ್ತು ಆಧುನಿಕ ಗೀತರೂಪಕಕ್ಕಿಂತ ಸಾಂಪ್ರದಾಯಿಕ ಯಕ್ಷರೂಪಕ ಶೈಲಿಯನ್ನು ಅಳವಡಿಸಿಕೊಂಡದ್ದು ಅರ್ಥಪೂರ್ಣವಾಗುತ್ತದೆ. ಆಧುನಿಕ ಯಕ್ಷರೂಪಕ ಶೈಲಿಯಲ್ಲಿ ಪ್ರದರ್ಶಿಸಬೇಕೆಂದು ಹೇಳುವಾಗ 'ಆಧುನಿಕ'

ಎನ್ನುವ ವಿಶೇಷಣದ ಬಳಕೆಯಿಂದ ಪು.ತಿ.ನ.ಅವರ ನಿರೀಕ್ಷೆ ಸಾಂಪ್ರದಾಯಿಕ ಯಕ್ಷರೂಪಕ / ನಾಟಕ ಕ್ಕಿಂತ ಭಿನ್ನವಾಗಿರಬೇಕೆಂಬ ಉದ್ದೇಶ ಸ್ಪಷ್ಟವಾಗುವುದಾದರೂ ಹೇಗೆಂಬುದು ಗ್ರಹಿಕೆಗೆ ಬರುವುದಿಲ್ಲ. ಆದರೆ, 'ಆಧುನಿಕ ಯಕ್ಷರೂಪಕವೆಂದರೆ ಅವರ ಅಭಿಪ್ರಾಯದಲ್ಲಿ ವೇಷಭೂಷಣಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದು, ಮಿಕ್ಕೆಲ್ಲವೂ ಯಕ್ಷಗಾನಗಳಲ್ಲಿರುವಂತೆ ಇದ್ದು, ಸಾಂಪ್ರದಾಯಿಕ ಯಕ್ಷಗಾನಗಳಲ್ಲಿ ಬಳಸುವರಾಗ, ವಾದ್ಯಗಳೆಲ್ಲವೂ ಹೊಸದಾಗಿದ್ದು ಭಾಗವತನೇ ಹಾಡುವುದಕ್ಕೆ ಬದಲಾಗಿ ಗೀತರೂಪಕಗಳಲ್ಲಿರುವಂತೆ ಆಯಾ ಪಾತ್ರಧಾರಿಗಳೇ ತಮ್ಮ ಭಾಗದ ಸಂಭಾಷಣಾ ಗೀತಗಳನ್ನು ಹಾಡಬೇಕೆಂಬುದು, ಅವರೊಂದಿಗಿನ ಸಂವಾದದ ಸಂದರ್ಭದಲ್ಲಿ ಸ್ವಲ್ಪ ಮಟ್ಟಿಗೆ ಗ್ರಹಿಸಲು ಸಾಧ್ಯವಾಗಿದೆ.

'ಸತ್ಯಾಯನ ಹರಿಶ್ಚಂದ್ರ'ವನ್ನು ಯಕ್ಷರೂಪಕವೆಂದು ಕರೆದ ಮನಸ್ಸಿಗೆ 'ಯಕ್ಷಗಾನ' ಶೀರ್ಷಿಕೆಯಲ್ಲಿ, ವ್ಯಂಗ್ಯ ಪ್ರಹಸನ ಸ್ವರೂಪದಲ್ಲಿ ಪೌರಾಣಿಕ ಪಾತ್ರಗಳನ್ನು ಆಧುನಿಕ, ಸಮಕಾಲೀನ ಚಿಂತನೆಗಳ ಅಭಿವ್ಯಕ್ತಿಗೆ ಬಳಸಿಕೊಳ್ಳುತ್ತಾರೆ. ರಾಜಕೀಯ, ಸಾಮಾಜಿಕ ಪರಿಸ್ಥಿತಿಯನ್ನು ರಾವಣನ ಪುನರವತರಣ ಅಥವಾ ಪುನರಾಗಮನದ ಮೂಲಕ ಬಿಂಬಿಸುವ ಪ್ರಯತ್ನ ಅವರಿಗಿರುವ ಸಮಕಾಲೀನ ರಾಜಕೀಯ ಪ್ರಜ್ಞೆಗೆ ಸಾಕ್ಷಿಯಾಗಿದೆ.

1952ರಲ್ಲಿ ಬರೆದ ಈ 'ಯಕ್ಷಗಾನ' ಶೀರ್ಷಿಕೆಯ ನಾಟಕ ಸ್ವಾತಂತ್ರ್ಯ ನಂತರದ ಭಾರತದ ರಾಜಕೀಯ ಸಾಮಾಜಿಕ ಪರಿಸ್ಥಿತಿಯ ಸ್ಪಷ್ಟ ಚಿತ್ರಣ ನೀಡುತ್ತದೆ. ಸ್ವಾತಂತ್ರ್ಯ ಬಂದು ಐದು ವರುಷಗಳೇ ಸಂದಿದ್ದರೂ ದೇಶದ ಪರಿಸ್ಥಿತಿಯಲ್ಲಿ ಯಾವುದೇ ಆಶಾ ದಾಯಕವಾದ ಬದಲಾವಣೆ ಕಾಣಲಿಲ್ಲ. ಅದೇ ದಾರಿದ್ರ್ಯ, ಕಷ್ಟ ಕಾರ್ಪಣ್ಯಗಳ ಕರುಳಿರಿವ ಪರಿಸ್ಥಿತಿ, ರಾವಣರು ಹೋದರೇನಂತೆ ಹೊಸರಾವಣರು ಬಂದು ನಾಡನ್ನು ಆಳುತ್ತಿದ್ದಾರೆ. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ ಎನ್ನುವ ಮಾತಿನಂತೆ, ಯಾರೇ ಬಂದರೂ ಜನಸಾಮಾನ್ಯರ ಪರಿಸ್ಥಿತಿಯಲ್ಲಿ ಗಮನಾರ್ಹವಾದ ಬದಲಾವಣೆಗಳೇ ಕಾಣುವುದಿಲ್ಲ. ಅವರ ನೋವು, ದುಃಖ, ಕಷ್ಟಗಳಿಗೆ ಮುಗಿವೆನ್ನುವುದು ತೀರಾ ಅಪರೂಪದ

ಸಂಗತಿಯಾಗಿದೆ. -ಎನ್ನುವ ಮೂಲಭೂತ ವಿಚಾರಗಳ ನಿರೂಪಣೆಗೆ ಗಂಭೀರವಾದ ಚಿಂತನಶೈಲಿಯನ್ನು ಬಳಸಿಕೊಳ್ಳುವುದಕ್ಕಿಂತ, ಹಾಸ್ಯ, ವ್ಯಂಗ್ಯಗಳ ಮಾಧ್ಯಮ ಈ ನಾಟಕದ ವಸ್ತು ಸಂದರ್ಭಕ್ಕೆ ಹೆಚ್ಚು ಪರಿಣಾಮಕಾರಿಯಾಗಿ ಹೊಂದುತ್ತದೆ ಎನ್ನುವ ನಿಲುವಿನೊಂದಿಗೆ ಈ ಕೃತಿರಚನೆಗೆ ಹೊರಟರು ಮತ್ತು ಅವರಿಗೆ ಗಂಭೀರ ವಿಚಾರಗಳ ನಿರೂಪಣೆಗೆ ಪುರಾಣ ಪ್ರತಿಮೆ, ವಸ್ತು ಹೆಚ್ಚು ಸಮರ್ಪಕವೆಂಬ ನಂಬಿಕೆಯಂತೆ, ಇಲ್ಲಿಯೂ ಪುರಾಣ ಸಂದರ್ಭ, ಪಾತ್ರಗಳನ್ನೇ ಬಳಸಿಕೊಂಡಿದ್ದಾರೆ.

ರಾಮ, ರಾವಣರ ಯುದ್ಧಾನಂತರ, ರಾವಣ ಮರಳಿ ಬದುಕಿ ಬಂದು ಲಂಕೆಯನ್ನು ಆಕ್ರಮಿಸಿಕೊಂಡು ಆಳುತ್ತಿದ್ದಾನೆ. ಪು.ತಿ.ನ. ರಾವಣನ ಈ ಆಳ್ವಿಕೆಯ ಕಾಲವನ್ನು ಇಂಥಾದ್ದೆಂದು ನಿರ್ದಿಷ್ಟವಾಗಿ ಹೇಳದೆ 'ಕಾಲ್ಪನಿಕ ಕಾಲ' ವೆಂದು ಸೂಚಿಸಿಬಿಡುತ್ತಾರೆ. ಈ ಕಾಲ್ಪನಿಕ ಕಾಲದ ಘಟನೆಗಳು ಯಾವ ಕಾಲಕ್ಕೂ ಅನ್ವಯಿಸಿಕೊಳ್ಳಬಹುದಾದ ರೂಪಕಾತ್ಮಕತೆಯನ್ನು ಪಡೆದಿವೆ.

ವಿಭೀಷಣನಾಳುತ್ತಿದ್ದ ಲಂಕೆಗೆ ರಾವಣ ಮರಳಿ ಬಂದು ಮತ್ತೆ ತನ್ನ ರಾಜ್ಯವನ್ನು ಆಕ್ರಮಿಸಿಕೊಳ್ಳುವುದೂ ಅಲ್ಲದೆ ತನ್ನ ಪರಾಕ್ರಮ ಸಾಮರ್ಥ್ಯ, ರಾಜ್ಯಭಾರದ ಹಿರಿಮೆ ಗರಿಮೆಗಳನ್ನು ಮಂತ್ರಿಗಳ ಮೂಲಕ ಹೊಗಳಿಸಿಕೊಳ್ಳುವುದು, ಅಲ್ಲಿನ ವಾಸ್ತವ ಸ್ಥಿತಿಯ ಹಿನ್ನೆಲೆಯಲ್ಲಿ ಬರಿವ್ಯಂಗ್ಯವಲ್ಲ, ದುರಂತ ವ್ಯಂಗ್ಯವಾಗಿ ಕಾಣಿಸುತ್ತದೆ. ಅಲ್ಲಿನ ಪರಿಸ್ಥಿತಿ ಘೋರತರವಾಗಿದೆ.

"ಉಸ್ಸೆಂಬ ಜನವಲ್ಲದೆ ಇಲ್ಲಿಹು
ಮ್ಮಸ್ಸಿನ ಜನರಿಲ್ಲವು
ಸಾಲ ಸೋಲವ ಮಾಗಿ
ಏತಕ್ಕೂ ಸಾಲದೆಂಬುದೆ ರೂಢಿ
ಕೊಬ್ಬಿದವರೇ ಸಭ್ಯರಾಗಿರೆ
ಆಸೆಗೆ ಮಿತಿಯಿಡುವ ಅನೀತಿಗೆ
ಹೇಸುವ ಗಣ್ಯರಿಲ್ಲ"

-ಎನ್ನುವ ಪರಿಸ್ಥಿತಿಯಲ್ಲಿ ಅವನ ಅಹಂಕಾರದ ಘೋಷಣೆ ಬೇರೆ

"ರಾಮು ಎಂದು ನೇಮದಿ ಪೇಳುವ
ಕಾಮಿಯ ಸೀಳುತ ಹೋಮವ ಮಾಡುವೆ
ರಾಮನ ನೆನೆದೂ ರಾವಣನೆನ್ನುವ
ಕೋಮಿನ ಜನಕೆ ಸನ್ಮಾನ ವಿಲ್ಲಲ್ಲದೆ "

-ಎನ್ನುವ ಇವನ ಆಳ್ವಿಕೆಯ ರೀತಿಗಳೇ, ಅವನ ಕಾಲದ ಪ್ರಜಾಪೀಡಕ ಮನೋವೃತ್ತಿಯೇ ಅಂದಿನ ಪ್ರಜೆಗಳ ದಾರುಣ ಸ್ಥಿತಿಯೇ ಎಂದೆಂದಿಗೂ!

ಭಾರತದ ಪರಿಸ್ಥಿತಿಯೂ ರಾವಣನಂತಹ ರಾಜಕೀಯ ವ್ಯಕ್ತಿಗಳಿಂದ ಹಾಗೇ ಇದೆ. ಆದರೆ ನಾರದನ ವಿವೇಕದ ಮಾತುಗಳಿಂದ ಅವನ ರಾಜ್ಯ ಭಾರತದಲ್ಲಿನ ದೌರ್ಬಲ್ಯಗಳು, ಅವನ ಧೋರಣೆಗಳು ವ್ಯಕ್ತಿತ್ವದಲ್ಲಿನ ಲೋಪ ದೋಷಗಳು ಮನವರಿಕೆಯಾಗಿ, ನಾಚಿ ಮುಂದೆಂದಾದರೂ ಬರುವೆನೆಂದು ರಾವಣನು ಮರೆಯಾಗುತ್ತಾನೆ. ಆದರೆ ನಮ್ಮ ದೇಶದ ರಾಜಕೀಯ ಸಾಮಾಜಿಕ ಸಂದರ್ಭದಲ್ಲಿ ನಮ್ಮ ನಾಯಕರಿಗೆ ನಾಚಿಕೆಯೇ ಇಲ್ಲ; ಅಪರಾಧಿ ಪ್ರಜ್ಞೆ ಕಾಡುವುದೂ ಇಲ್ಲ ಅದಕ್ಕೆಂದೇ, ಮಾನ ಮರ್ಯಾದೆಗಳನ್ನೂ ಬದಿಗಿರಿಸಿ, ಪದವಿ, ಪ್ರತಿಷ್ಠೆಗಳಲ್ಲಿ ಮುಂದು ವರಿಯುತ್ತಾರೆ. ಪ್ರಜಾಹಿತ ಚಿಂತನೆಗಿಂತ ಸ್ವಚಿಂತನೆ, ಸ್ವಹಿತ, ಸ್ವಲಾಭಗಳೇ ಪ್ರಮುಖ ಆದ್ಯತೆಗಳಾಗಿಸಿಕೊಂಡು ಮುಂದುವರೆಯುತ್ತಾರೆ. -ಎನ್ನುವುದರ ಕಡೆಗೆ ನಿರ್ದೇಶವಿದೆ. ಕಥೆಯ ಒಂದೇ ಒಂದು ತೆಳುವಾದ ಎಳೆ ಹಿಡಿದು, ತಮ್ಮ ಸಮಕಾಲೀನ ಚಿಂತನೆಗಳ ಅಭಿವ್ಯಕ್ತಿಗೊಂದು 'ಯಕ್ಷಗಾನ' ರೂಪ ಸಂಯೋಜನೆಯನ್ನು ಕಂಡು ಕೊಂಡಿದ್ದಾರೆ.

ಎಂ. ಪ್ರಭಾಕರ ಜೋಷಿಯವರ ಅಭಿಪ್ರಾಯದಲ್ಲಿ, ಈ ರೂಪಕದಲ್ಲಿ ಬಳಸಿರುವ ಭಾಷೆ ಮೂಡಲಪಾಯದ ಆಟವನ್ನು ಹೋಲುತ್ತದೆ. ವೇಷಭೂಷಣ ಮತ್ತು ಪ್ರಯೋಗವೆಲ್ಲವೂ ಯಕ್ಷಗಾನ ರೀತಿಯಲ್ಲದೆ ರಾವಣನ ಗುಣದ ಹೊಗಳಿಕೆಗೆ ಮೇಳವನ್ನು ಬಳಸಿ ಕೊಂಡಿದ್ದಾರೆ. ಹಾಡುಗಳಂತೂ ಯಕ್ಷಗಾನ, ಬಯಲಾಟಗಳಲ್ಲಿ ಕಾಣುವಂತೆ

'ಭಡ ಭಡ' ಭಾಷೆಯ ಶೈಲಿಯಲ್ಲಿಯೇ ರಚಿತವಾಗಿದೆ. ಶಬ್ದಾಡಂಬರ ಪ್ರಾಸ ವೈಭವ ಈ ನಾಟಕಕ್ಕೆ ಯಕ್ಷಗಾನದ ಆವರಣವನ್ನು ಕಲ್ಪಿಸಿಕೊಡುವುದಕ್ಕೂ ವ್ಯಂಗ್ಯದ ನಿರೂಪಣೆಗೂ ಅನುಕೂಲಕರವಾಗಿ ಪರಿಣಮಿಸಿದೆ. ಪು.ತಿ.ನ. ಅವರ ಪ್ರಯೋಗಶೀಲತೆಯೇ ಅವರನ್ನು ಒಂದೊಂದು ಮಾಧ್ಯಮಕ್ಕೂ ಹೊಸ ಹೊಸ ಆಯಾಮಗಳನ್ನು ಕಲ್ಪಿಸುವ ಪ್ರಯತ್ನಗಳತ್ತ ನಡೆಸುತ್ತಾ ಬಂದಿವೆ. ಯಕ್ಷಗಾನಗಳಲ್ಲಿ ಗೀತರೂಪಕಗಳ ಸಾಧ್ಯತೆಯನ್ನು ಕಂಡು ಕೊಂಡವರಾದ್ದರಿಂದ, 'ಯಕ್ಷಗಾನ' ರೂಪಕಗಳನ್ನು ಇಡಿ ಇಡಿಯಾಗಿ ಹಾಗೆಯೇ ಬಳಸಿಕೊಳ್ಳದೆ, ಶಿಷ್ಟರೂಪದ ಗೀತರೂಪಕದ ಕೆಲವು ಅಂಶಗಳನ್ನು 'ಯಕ್ಷಗಾನ'ರೂಪಕ್ಕೆ ತೊಡಿಸಿ 'ಸತ್ಯಾಯನ ಹರಿಶ್ಚಂದ್ರ' 'ಯಕ್ಷಗಾನ'-ರೂಪಕಗಳನ್ನು ರಚಿಸಿದ್ದಾರಾದರೂ, ವಸ್ತುವಿನ ಆಯ್ಕೆ, ಸಂವಿಧಾನ, ರಚನೆ-ಇವುಗಳ ವಿಚಾರದಲ್ಲಿ 'ಸತ್ಯಾಯನ-ಹರಿಶ್ಚಂದ್ರ' ದಲ್ಲಿರುವಷ್ಟು ಸೀರಿಯಸ್‌ನೆಸ್ 'ಯಕ್ಷಗಾನ ರೂಪಕ' (ರಾವಣ ಬಂದು ಹೋದದ್ದು ಕುರಿತು) ಸಂದರ್ಭದಲ್ಲಿ ಇಲ್ಲ. ಮೂಲತಃ 'ಯಕ್ಷಗಾನರೂಪಕ' ಒಂದು ಪ್ರಹಸನ, ಅದರ ಧ್ವನಿ ವ್ಯಂಗ್ಯ.

ಪು.ತಿ.ನ. ಅವರು ಹೆಚ್ಚಾಗಿ ತಮ್ಮ ಗೀತನಾಟಕಗಳಿಗೆ ಬಳಸಿಕೊಂಡ ವಸ್ತು ಧಾರ್ಮಿಕ, ಪೌರಾಣಿಕ ಮತ್ತು ನಮ್ಮ ಪ್ರಾಚೀನ ಕಾವ್ಯ, ಆಖ್ಯಾನಗಳು ಮೊದಲಾದವುಗಳಿಂದಲೇ ಆದರೂ ಸಾಮಾಜಿಕ, ರಾಜಕೀಯ ಪ್ರಜ್ಞೆಗಳಿಗೆ ಹೊರತಾದವರಲ್ಲ. ಬದುಕಿನ ಸಮಸ್ಯೆಗಳು, ಮಾನವ ಸಂಬಂಧಗಳು, ತನ್ಮೂಲದ ಪ್ರೀತಿ, ಪ್ರೇಮ, ದ್ವೇಷ-ಇತ್ಯಾದಿಗಳೆಲ್ಲವನ್ನೂ ತಮ್ಮ ಚಿಂತನೆಗೆ ಆಗುಮಾಡಿಕೊಳ್ಳುತ್ತಾರೆ. ಅದರಲ್ಲಿಯೂ ಪ್ರೀತಿ, ಪ್ರೇಮಗಳಿಗೆ ಇರುವ, ಇರಬಹುದಾದ ಹಲವು ಆಯಾಮಗಳ ಶೋಧ ಚಿಂತನೆಗೆ ಹೊರಡುತ್ತಾರೆ. ಮೂಲಭೂತ ಮಾನವ ಪ್ರವೃತ್ತಿಯಾದ 'ಕಾಮ' ವನ್ನು ಚಿಂತನೆಯ ತೆಕ್ಕೆಗೆ ತೆಗೆದು ಕೊಂಡು ಕಾಮ, ಪ್ರೇಮಗಳ ಅಂತರವನ್ನು ಸಾಂಪ್ರದಾಯಿಕ, ಧಾರ್ಮಿಕ ಧೋರಣೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ ಸ್ತ್ರೀ-ಪುರುಷರ ನಡುವೆ ಕಾಮದಾಕರ್ಷಣೆ ಸಹಜವೂ ಅನಿವಾರ್ಯವೂ ಆಗಿರುವುದಾದರೂ ಅದು ದೈಹಿಕ, ಲೈಂಗಿಕ ಆಕರ್ಷಣೆಗಳಾಚೆಗೆ ವಿಕಾಸಗೊಂಡು ಧರ್ಮ

ಸಂಯಮಿತ ನೆಲೆಯಲ್ಲಿ ನಿಂತಾಗ 'ಪ್ರೇಮ' ವೆನಿಸಿಕೊಳ್ಳುತ್ತದೆ. 'ಅಹಲ್ಯೆ' ಗೀತನಾಟಕದಲ್ಲಿ ಇದೇ ಅದರ ಕೇಂದ್ರ ಚಿಂತನೆ. ಆದರೆ 'ಗೋಕುಲ ನಿರ್ಗಮನ' 'ನಳದಮಯಂತಿ' ಗೀತನಾಟಕಗಳಲ್ಲಿ 'ಪ್ರೇಮ' ಪ್ರೀತಿ ಹಲವು ಸಂಬಂಧಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಆಗುತ್ತವೆ. ರಾಧಾ-ಕೃಷ್ಣ ಕೃಷ್ಣ-ಗೋಪಾಲಕರು, ಕೃಷ್ಣ-ಜನರು ಈ ಸಂಬಂಧಗಳಲ್ಲಿ ಪ್ರೇಮ, ಪ್ರೀತಿಗಳು, ವಾತ್ಸಲ್ಯ, ಸ್ನೇಹ ಇತ್ಯಾದಿಗಳಾಗಿ ರೂಪಾಂತರಗೊಳ್ಳುತ್ತವೆ.

'ನಳ-ದಮಯಂತಿ' ಗೀತನಾಟಕವನ್ನು ಪ್ರೇಮಾಖ್ಯಾನವೆಂದೇ ಗುರುತಿಸಬಹುದು. ನಮ್ಮ ಪ್ರಾಚೀನ ಕಾವ್ಯ ಪರಂಪರೆಯಲ್ಲಿ ನಳ-ದಮಯಂತಿ ಕತೆ ಜನ ಜನಿತವೂ, ಅತಿ ಪ್ರಚಲಿತವೂ ಆಗಿದೆ. ಮಹಾಭಾರತದ ಅರಣ್ಯಪರ್ವ ವಾಜಸನೇಯ ಸಂಹಿತೆ, ಸೋಮದೇವನ 'ಕಥಾಸರಿತ್ಸಾಗರ' ಕೇರಳದ ವಾಸುದೇವಕವಿಯ 'ನಳೋದಯ' ನೈಷದೀಯಮ್, 'ಶ್ರೀನಾಥನ' 'ಶೃಂಗಾರ ನೈಷಧಮು' 'ಚೌಂಡರಸನ' 'ನಳಚಂಪು' 'ಕನಕದಾಸರ' 'ನಳಚರಿತ್ರೆ' -ಮೊದಲಾದವು ಪು.ತಿ.ನ. ಅವರ ಈ ನಾಟಕದ ಕಥಾಮೂಲಗಳಾಗಿವೆ. ಮೂಲ ಕಥಾ ಸಂದರ್ಭವನ್ನು ಹಾಗೆಯೇ ಇರಿಸಿಕೊಂಡು ನಿರೂಪಣೆಯ ದೃಷ್ಟಿಯಿಂದ ಕೆಲವೆಡೆ ವಿಸ್ತರಿಸಿದ್ದಾರೆ; ಮತ್ತೆ ಕೆಲವೆಡೆ ಮೊಟಕು ಗೊಳಿಸಿದ್ದಾರೆ.

ಇಲ್ಲಿ ಪು.ತಿ.ನ. ಅವರು ಯಾವುದೇ ಸಂಕೀರ್ಣತೆಗೆ, ಗಂಭೀರ ಚಿಂತನೆಗೆ ಹೊರಡದೆ, ತಮ್ಮ ಅದ್ಭುತ ಕಾವ್ಯಶಕ್ತಿಯ ಮೂಲಕ, ಲಲಿತ, ಮಧುರ ಗೀತೆಗಳನ್ನು ತಂದು ಆಹ್ಲಾದಕರವಾದ, ಮೋಹಕವಾದ ಒಂದು ವಾತಾವರಣವನ್ನು ಸೃಷ್ಟಿಸಿದ್ದಾರೆ, ಕೆಲವೆಡೆ ಈ ಕಥೆಗೆ ಆಧ್ಯಾತ್ಮಿಕ, ಅನುಭಾವಿಕ ನೆಲೆಯ ವ್ಯಾಖ್ಯಾನವನ್ನೂ ನೀಡುವ ಪ್ರಯತ್ನ ನಡೆದಿದೆ. ನಳದಮಯಂತಿಯರ ಸಂಬಂಧ ಭಗವಂತ ಭಕ್ತ ಅಥವಾ ಪರಮಾತ್ಮ -ಜೀವಾತ್ಮ-ಸಂಬಂಧದೊಂದಿಗೆ ಸಮೀಕರಿಸಲು ಹೊರಟಿದ್ದಾರೆ. 'ಹಂಸ' ವೆಂಬ ಗುರುವಿನ ಮಾಧ್ಯಮದಿಂದ ಪರಮಾತ್ಮ-ಜೀವಾತ್ಮರ ಸಂಯೋಗ, ಸಮಾಗಮ ಅಥವಾ ಸಮ್ಮಿಲನವಾದಂತೆ ಭಾವಿಸಲಾಗಿದೆ. ಆದರೆ ಪು.ತಿ.ನ. ಆ ಬಗೆಯ ತಾತ್ವಿಕ ವಿಶ್ಲೇಷಣೆಗೆ ಹೊರಡದೆ ಹಂಸ ದೌತ್ಯದ ಮೂಲಕ ನಳದಮಯಂತಿಯರ ನಡುವೆ ಪ್ರೇಮೋದಯವಾಗುವಷ್ಟಕ್ಕೇ ಸೀಮಿತ

ಗೊಂಡಿವೆ. ಈ ನಾಟಕದಲ್ಲಿ ದಮಯಂತಿ ಮತ್ತು ಮಾನವಾರೋಪಿತವಾದ ಹಂಸ-ಇವರೇ ಇಲ್ಲಿನ ಮುಖ್ಯ ಪಾತ್ರಗಳು ಇದೊಂದು ಲಘು ಗೀತನಾಟಕ, ಆದರೆ ಪ್ರೇಮಾಖ್ಯಾನಗಳಲ್ಲಿ ನಾಯಕ ನಾಯಕಿಯರ ನಡುವೆ ಪ್ರೇಮಾಂಕುರವಾಗಲು, ಸ್ವಪ್ನದರ್ಶನ, ಗುಣಶ್ರವಣ, ಪ್ರತ್ಯಕ್ಷ ದರ್ಶನ ಮೊದಲಾದ ಭಿನ್ನ ತಂತ್ರಗಳನ್ನು ನಮ್ಮ ಕವಿಗಳು ಬಳಸಿ ಕೊಂಡಿದ್ದಾರೆ. ಆದರೆ ಇವುಗಳಲ್ಲಿ 'ಗುಣಶ್ರವಣ' ತಂತ್ರವೇ ಹೆಚ್ಚಾಗಿ ಬಳಕೆಯಾಗಿದೆ. ಪು.ತಿ.ನ. ಅವರೂ ಇದಕ್ಕೇ ಹೆಚ್ಚಿನ ಮಹತ್ವಕೊಟ್ಟು ಹಂಸದ ಮೂಲಕ ಪರಸ್ಪರರ ಗುಣಗಳನ್ನು ಕೇಳಿಸಲಾಗಿದೆ.

ಅನೇಕ ಸಲ ಪು.ತಿ.ನ. ಅವರ ಬೆರಗು, ಸ್ವಪ್ನಾವಸ್ಥೆ, ಕುತೂಹಲ, ಜಿಜ್ಞಾಸೆ, ಆಕಸ್ಮಿಕ ಘಟನೆ-ಅವರ ಗೀತನಟಕಗಳ ಸೃಷ್ಟಿಗೆ ಪ್ರಬಲ ಪ್ರೇರಣೆಗಳಾಗಿವೆ. ನಳ-ದಮಯಂತಿ ಕಥಾ ಸಂದರ್ಭದಲ್ಲಿಯೂ ಇಂತಹವೇ ಒಂದು ಬೆರಗು ಪ್ರಚೋದನೆಯಾಗಿದೆ. ಕೇವಲ ಒಂದು ಹಂಸ ನಾಯಕ ನಾಯಕಿಯರ ನಡುವೆ ಪ್ರೇಮೋದಯಕ್ಕೆ ಕಾರಣವಾಗುವುದು ಅವಾಸ್ತವ ಸಂಗತಿ. ಆದರೆ ಈ ಸಂದರ್ಭದಲ್ಲಿ, ವಾಸ್ತವಕ್ಕೂ ಮೀರಿದ; ವಾಸ್ತವವೆನ್ನುವಷ್ಟು ಸಹಜವಾಗಿ ನಿರೂಪಿತವಾಗಿದೆ; ಪ್ರಚಲಿತವಾಗಿದೆ. ಇದು ಸಾಧ್ಯವಾಗಿರುವುದು ಕತೆಗಾರನ ಕಲ್ಪನಾ ಸಾಮರ್ಥ್ಯದಿಂದ ಮಾತ್ರ!

-ಎಂಬ ಅರಿವೂ ಇದೆ. ಅದಕ್ಕೆಂದೇ ಅವರು, "ಹಂಸಂ ಮರ್ತ್ಯ ಪ್ರಣಯವಹನಕ್ಕಾದುದೆಂಬೀ ವಿಚಿತ್ರಂ"

-ಎಂದು ಉದ್ಗರಿಸುತ್ತಾರೆ. ಕವಿ ಮನಸ್ಸಿಗೆ ಕತೆಗಾರನ ಕೌಶಲದ ಬಗ್ಗೆ, ಅವನ ಪ್ರತಿಭಾಶಕ್ತಿ ಸಾಮರ್ಥ್ಯದ ಬಗ್ಗೆ ಅಪಾರ ಮೆಚ್ಚುಗೆಯಿದೆ. ಆದ್ದರಿಂದಲೇ ಸೂತ್ರಧಾರನ ಮೂಲಕವಾಗಿ,

"ಕಪಿ ಹಾರಿತು ಹೆಗ್ಗಡಲನು ಎಂಬೆ
ಕಡಲನೆ ಕಡೆದರು ಬೆಟ್ಟದೊಳೆಂಬೆ
ನಿನ್ನೂಹೆಯ ಹೇರಾಳವ ತುಂಬೆ
ಸೃಷ್ಟಿಕರ್ತನಿಗು ಅರಿದೆಂಬೆ"

- ಹಂ. ದ. ಇ. ರೂ ಪುಟ-1

-ಎಂಬ ಮೆಚ್ಚುಗೆಯ ಮಾತುಗಳಿಂದ ಕವಿಸೃಷ್ಟಿ, ಕವಿಕರ್ಮದ ಅದ್ಭುತ ಶಕ್ತಿಗೆ ನಮನ ಸಲ್ಲಿಸಿದ್ದಾರೆ.

ಈ ಗೀತರೂಪಕ ಚಿಂತನ ಮೌಲ್ಯಕ್ಕಿಂತ, ಕಲಾಮೌಲ್ಯದ ದೃಷ್ಟಿಯಿಂದ ಮಹತ್ವ ಪೂರ್ಣವಾಗಿದೆ.

ಪ್ರಕೃತಿ ಮತ್ತು ಪರ್ವಾಧಾರಿತ ಗೀತನಾಟಕಗಳು... ರಾಮ, ಕೃಷ್ಣ ಚರಿತ್ರೆಗಳು, ಪುರಾಣ ಮಹಾಕಾವ್ಯಗಳ ಕಥಾನಕಗಳ ನಂತರ ಅವರು ತಮ್ಮ ಗೀತನಾಟಕಗಳಿಗೆ ಆಯ್ದುಕೊಂಡ ವಸ್ತುಗಳು ಪ್ರಕೃತಿ ಮತ್ತು ಪರ್ವಗಳು, ಗಟ್ಟಿಯಾದ ತಾತ್ವಿಕತೆಯನ್ನು ಕಟ್ಟಿಕೊಡುವುದು; ಅನವಶ್ಯಕವಾದ ಸಂಕೀರ್ಣತೆಯನ್ನು ಹೇರಿ, ಉದ್ದೇಶಿತ ಆಶಯಗಳಿಂದ ದಾರಿ ತಪ್ಪಿಸುವುದು ಪು.ತಿ.ನ. ಅವರ ಗುರಿಯಲ್ಲವಾದರೂ ಆಸ್ತಿಕ ಮನಸ್ಸಿನ, ಧಾರ್ಮಿಕ ನಂಬಿಕೆಯ, ಸಂಸ್ಕೃತಿ ನಿಷ್ಠೆಯ, ಸಾಂಪ್ರದಾಯಿಕ ಮತ್ತು ಆಧುನಿಕತೆಯ ಸಮನ್ವಯ ಧೋರಣೆಯ ಪು.ತಿ.ನ. ಅವರು ಹಬ್ಬ, ಹರಿದಿನಗಳನ್ನು ಒಪ್ಪಿಕೊಂಡ, ಪುರಸ್ಕರಿಸಿದ ರೀತಿಯೇ ವಿಭಿನ್ನ, ವಿಶಿಷ್ಟ!.

ಹಬ್ಬ, ಹರಿದಿನಗಳು ಧರ್ಮ, ದೇವರುಗಳ ಸಾಂಕೇತಿಕ ಅಭಿವ್ಯಕ್ತಿ. ಇವುಗಳ ಅಂಗವಾಗಿ ನಡೆವ ಉತ್ಸವ, ಜಾತ್ರೆ-ಇವೆಲ್ಲಕ್ಕೂ ಒಂದು ವಿಶೇಷ ಅರ್ಥವಿದೆ, ಎಂಬ ನಂಬಿಕೆ, ಶ್ರದ್ಧೆ. ಜಗತ್ತಿನಲ್ಲಿ ಮನುಷ್ಯ ಆತ್ಮಗ್ಲಾನಿಯಿಂದ ನರಳುವಾಗ, ಕೆರಳುವಾಗ, ಅವನ ಆತ್ಮೋದ್ಧಾರಕ್ಕಾಗಿ ಮತ್ತು ಜಡಸ್ಥಿತಿಯಿಂದ ಋತದತ್ತ ಕರೆದೊಯ್ಯುವುದಕ್ಕಾಗಿ ಭಗವದವತಾರವಾಯಿತೆಂದೂ, ಮತ್ತು ಆ ಭಗವತ್ ರೂಪಗಳಿಗೆ ನಿರ್ಮಿಸಿದ ಗುಡಿಗಳು, “ಶ್ರೇಷ್ಠ ಮನುಷ್ಯರಲ್ಲಿ ಮೂಡಿರುವ ಯಾವುದೋ ಒಂದು ಸಮೃದ್ಧ ಭಾವದ ಆಸ್ತಿಕ್ಯವನ್ನು ಸೂಚಿಸುತ್ತದೆ” ಮತ್ತು ಇವುಗಳು ಪಾರಮಾರ್ಥಿಕ ಶ್ರದ್ಧೆಯ ಸಂಕೇತಗಳಾಗಿ ಮಾನವ ಚೇತನಗಳಿಗೆ ಬಯಸಿದಾಗ ಆನಂದವೃದ್ಧಿಯನ್ನು, ಭವ ಪ್ರಶಮನ ಸ್ಥಿತಿಯನ್ನು ಒದಗಿಸಿ ಕೊಡುವ, ಸಾಧನಗಳಾಗಿವೆ-ಎಂಬುದು ಪು.ತಿ.ನ.ರ ಚಿಂತನೆಯ ಪರಿಣಾಮ ಜನ್ಯ ನಂಬಿಕೆ, ಅಭಿಪ್ರಾಯಗಳಾಗಿವೆ. ಇಷ್ಟಕ್ಕೇ ನಿಲ್ಲದೆ ತಮ್ಮ ಈ ನಂಬಿಕೆ, ಅಭಿಪ್ರಾಯಗಳನ್ನು ಮತ್ತಷ್ಟು ವಿಸ್ತೃತ ವಿವರಣೆಗಳಿಂದ ಸಮರ್ಥಿಸುತ್ತಾರೆ. ಗುಡಿ, ಮನುಷ್ಯನಲ್ಲಿನ ಆಸ್ತಿಕ್ಯ, ಪಾರಮಾರ್ಥಿಕ ಶ್ರದ್ಧೆ ಭವಪ್ರಶಮನ

ಸಾಧನಗಳಾಗಿರುವುದಲ್ಲದೆ "ಮಾನವನ ಬಾಳಿನ ಕೆರೆಗೆ ತೂಬಿದ್ದ ಹಾಗೆ ಸಂದಿ, ಇಕ್ಕಟ್ಟು ! ಆದರೆ ಕೆರೆಯ ನೀರಿನ ಸೆಳೆತವೆಲ್ಲಾ ಆ ರಂಧ್ರದ ಕಡೆಗೇ ಅಲ್ಲವೇ? ಭವ ಮುಕ್ತಿಯ ಆಸೆತೋರಿ ಜನತೆಯನ್ನು ತನ್ನೆಡೆಗೆ ಸೆಳೆಯುತ್ತದೆ" ಎಂದು ಹೋಲಿಕೆಯ ಮೂಲಕವಾಗಿ ಮತ್ತಷ್ಟು ವಿಶದೀಕರಿಸುತ್ತಾರೆ. ಇಂತಹ ಒಂದು ಗಟ್ಟಿಯಾದ ತಾತ್ವಿಕ ನಂಬಿಕೆಗೆ ಬದ್ಧರಾಗಿರುವುದರಿಂದಲೇ ಇವುಗಳನ್ನು ಇಂದಿನವರಂತೆ, ಯಾವುದೇ ಶ್ರದ್ಧೆಯಿಲ್ಲದೆ ಯಾಂತ್ರಿಕತೆ ಮತ್ತು ನಿರುತ್ಸಾಹಗಳೊಂದಿಗೆ ಆಚರಿಸದೆ, ನಿಜವಾದ ಶ್ರದ್ಧೆ, ಉತ್ಸಾಹ, ಭಕ್ತಿಗಳೊಂದಿಗೆ ಧಾರ್ಮಿಕ, ಸಾಂಸ್ಕೃತಿಕತೆಗಳ ಸಮನ್ವಯದೊಂದಿಗೆ ಆಚರಿಸುತ್ತಾರೆ. ಅಷ್ಟೇ ಅಲ್ಲ ಇಂದಿನ ಆಧುನಿಕ, ಯುವಮನಸ್ಸುಗಳೂ ಇದೇ ನಿಲುವಿನೊಂದಿಗೆ ಸಾಗಬೇಕೆನ್ನುವ ಆಸೆ, ಹಂಬಲಗಳನ್ನು ತಳೆಯುತ್ತಾರೆ ಆದರೆ ಇವು ಕನಸುಗಳಾಗಿ ಮಾತ್ರವೇ ಸಾಧ್ಯ ಎಂಬ ಕಟು ಸತ್ಯದ ಸಾಕ್ಷಾತ್ಕಾರ ಅವರ ಮನಸ್ಸನ್ನು ಖೇದಕ್ಕೆ, ಉದ್ವಿಗ್ನತೆಗೆ ಒಳಗಾಗಿಸಿದೆ. ತಮ್ಮ ಜೀವನಾವಧಿಯಲ್ಲಿಯೇ ಅಂದು-ಇಂದುಗಳಲ್ಲಿ ಸ್ಥಿತ್ಯಂತರವನ್ನು ಗಮನಿಸಿದಾಗ -,

"ಅಂದಿನ ಉಲ್ಲಾಸವೆಲ್ಲಿ, ಶ್ರದ್ಧೆಯೆಲ್ಲಿ, ಸಂಭ್ರಮವೆಲ್ಲಿ, ಚೈತನ್ಯವೆಲ್ಲಿ, ಪ್ರಭೆಯೆಲ್ಲಿ, ಅಂದಿನ ಜನ ಜೀವನದ ನೆರೆಯೆಲ್ಲಿ, ಲೀಲೆಯೆಲ್ಲಿ ವಿಲಾಸವೆಲ್ಲಿ, ವೈಭವವೆಲ್ಲಿ? ಅಂತರ್ಜ್ವರವೊಂದು ಜನಜೀವನವನ್ನು ಹೊಕ್ಕು ಅವನ್ನು ಶೋಷಿಸುತ್ತಿರುವಂತೆ ಕಾಣುತ್ತದೆ, ಜನತೆಯಲ್ಲಿ ಶಾಂತಿ ಅಳಿದಿದೆ ಜೀವನ ಮೂಡಿದೆ," (ಯದುಗಿರಿ, ಪುಟ-561) ಎಂದು ನುಡಿದ ಇವರ ಮಾತುಗಳಲ್ಲಿ ನಿರಾಶೆ, ವಿಷಾದ, ಖೇದ, ನೋವು, ಒಂದು ಬಗೆಯ ಅನಿವಾರ್ಯ ಅಸಹಾಯಕತೆಗಳು ಧ್ವನಿತವಾಗಿವೆ, ಇಂದಿನ ಎಲ್ಲ ಹಬ್ಬಗಳಲ್ಲಿ, ಉತ್ಸವ ನೇಮಗಳಲ್ಲಿ ಆತ್ಮವಿಲ್ಲ; ಪ್ರಭೆಯಿಲ್ಲ; ಮುಪ್ಪು, ಸಾವು ಸೋಂಕಿ ಕೇವಲ ಉಸಿರು ಹೊಯ್ಯುವ ಶ್ರದ್ಧೆಯ ಶವಗಳಂತೆ ಕಾಣುತ್ತಿವೆ, ಎಂಬುದು ಅವರ ಭಾವನೆ.

ಹಿಂದಿನ ತಲೆಮಾರಿನ ಜನಕ್ಕೆ ಹಬ್ಬಹರಿದಿನಗಳು ಕ್ಷೇಮ ಸಮೃದ್ಧಿ ಸಂತೋಷಾಹ್ಲಾದಕಾರಕಗಳಾಗಿ ಜೀವ ಚೈತನ್ಯದಿಂದ ಕೂಡಿ ಕಳೆಗಟ್ಟಿ ಅವರ ಜೀವನದ ಅವಿಭಾಜ್ಯ ಅಂಗಗಳಾಗಿ ಧರ್ಮ, ಸಂಸ್ಕೃತಿಗಳ ಸಾರಸರ್ವಸ್ವವಾಗಿ

ಆಚರಣೆಗೆ ಬರುತ್ತಿದ್ದವು, "ಇಂದಿನ ಜನಕ್ಕೆ ಸುಖದಾಕಾಂಕ್ಷೆಯೊಂದೇ ಮುಖ್ಯವಾಗಿ, ಅದನ್ನು ಪಡೆದುಕೊಳ್ಳುವ ಸಾಧನೆಗಳಾದ ವಿದ್ಯೆ ಮತ್ತು ವೃತ್ತಿಯ ಬೆನ್ನುಹತ್ತಿ ಮಾತ್ರಹೊರಟಿದ್ದಾರೆ ಎನ್ನುವುದು ಪುತಿನ ಅವರ ಚಿಂತನ ಗ್ರಹಿಕೆ. ಯಾರಿಗೂ ಈಗ ಉಲ್ಲಾಸಬೇಕಿಲ್ಲ, ಕ್ಷೇಮ ಬೇಕು, ಗಳಿಕೆಬೇಕು, ಸುಖಬೇಕು, ಹಬ್ಬ ಹರಿದಿನಗಳು ಬೇಡವೇ ಬೇಡ; -ಎನ್ನುವುದಾದರೆ ಕಾಯಕ್ಲೇಶ, ಬೇಸರಗಳು ನಿವಾರಣೆ ಆಗುವುದಾದರೂ ಹೇಗೆಂಬುದೇ ಅವರ ಪ್ರಶ್ನೆ."

ಪು.ತಿ.ನ. ಅವರಿಗೆ, ಹಿಂದಿನವರಲ್ಲಿದ್ದ ಜೀವನ ಶ್ರದ್ಧೆ ಜೀವನೋತ್ಸಾಹಗಳ ಬಗ್ಗೆ ಅಪಾರವಾದ ಹೆಮ್ಮೆಯಿದೆ. ಇಂತಹ ಮನಸ್ಸಿಗೆ, ಇಂದಿನವರು ಅಂತಹ ಭವ್ಯ ಬದುಕನ್ನು ತಿರಸ್ಕರಿಸಿ ಅರ್ಥಹೀನವಾದ ನೀರಸವಾದ, ಬೇಸರದ ಕ್ರಿಯೆಗಳಲ್ಲಿ ವಿವಶತೆಯಿಂದ ತೊಡಗಿಸಿಕೊಂಡು ಅಸ್ವಸ್ಥರಾಗುತ್ತಿರುವುದು ನೋವಿನ ಸಂಗತಿಯಾಗಿದೆ. ಅಂಥವರ ಬಗ್ಗೆ ಹೃದಯ ಅನುಕಂಪದಿಂದ ದ್ರವಿಸುತ್ತದೆ. ಇಂತಹ ಪರಿಸ್ಥಿತಿ, ಪರಿಸರ, ನಿಲುವುಗಳಿಂದ ಇಂದಿನ ಜನಾಂಗವನ್ನು ಬಿಡಿಸಬೇಕಾದರೆ, ಅವರಲ್ಲಿ ಉತ್ಸಾಹ, ಚೈತನ್ಯಗಳನ್ನು ತುಂಬ ಬೇಕಾದರೆ, ಶೋಚನೀಯ ಪರಿಸ್ಥಿತಿಯ ಸಂದಿಗ್ಧದ ಸುಳಿಯಿಂದ ತಪ್ಪಿಸಬೇಕಾದರೆ ಕೆಲವು ಹೊಸ ಮಾರ್ಗಗಳನ್ನು, ಸಮನ್ವಯದ ಹಾದಿಗಳನ್ನು ಕಂಡುಕೊಳ್ಳಬೇಕು; ಇಂತಹ ನಿರಾಶಾದಾಯಕವಾದ ಪರಿಸರದಲ್ಲಿದ್ದರೂ ಆಸೆಯ ಕನಸನ್ನು ಬಿಡದೆ ಪ್ರಯತ್ನಗಳನ್ನು ಮುಂದುವರೆಸುವುದು ಅನಿವಾರ್ಯವೆಂಬುದು ಅವರ ಗಟ್ಟಿ ನಂಬಿಕೆ. ಹಿಂದಿನವರು ರೂಪಿಸಿದ ಹಬ್ಬ, ಹರಿದಿನ, ವ್ರತ, ನೇಮ ಇತ್ಯಾದಿಗಳನ್ನು ಆಚರಣೆಯಲ್ಲಿ ಕೈ ಬಿಡದೆ ಅವುಗಳನ್ನು ನಮ್ಮ ಕಾಲಕ್ಕೆ, ಮನೋಧರ್ಮಕ್ಕೆ ತಕ್ಕಂತೆ ರೂಪಿಸಿಕೊಂಡು ರೂಢಿಸಿಕೊಂಡು ಹೋಗುವುದೇ ಸರಿಯಾದ ಹಾದಿ ಮತ್ತು ಶ್ರೇಯಸ್ಕರವೆಂದು ಭಾವಿಸುತ್ತಾರೆ.

ವೈಜ್ಞಾನಿಕ ಯುಗದ ಜನರಾದ ನಮಗೆ ಹಳೆಯ ವಿಚಾರಗಳಲ್ಲಿ, ಆಚರಣೆಗಳಲ್ಲಿ ನಂಬಿಕೆಯಿಲ್ಲ ಎನ್ನುವುದು ವಾಸ್ತವ ಸಂಗತಿಯೇ ಆದರೂ ಪು.ತಿ.ನ.ರು ಮತ್ತೆ ಮತ್ತೆ ಜನಮನಸ್ಸನ್ನು ನಮ್ಮ ಪ್ರಾಚೀನ ಧಾರ್ಮಿಕ,

ಸಾಂಸ್ಕೃತಿಕ ಆಚರಣೆಗಳತ್ತ ತಿರುಗಿಸಲು ಪ್ರಯತ್ನಿಸುತ್ತಾರೆ. ಆಚರಣೆಯ ವಿಧಿ ವಿಧಾನಗಳಲ್ಲಿ ಸ್ವಲ್ಪ ಮಾರ್ಪಾಟನ್ನು, ಪರಿಷ್ಕಾರವನ್ನು ಸ್ವಾಗತಿಸುವವರಾದರೂ ಪೂರ್ತಿಯಾಗಿ ಅವುಗಳನ್ನು ಕೈಬಿಡುವ ವಿಚಾರವನ್ನು ಎಂದಿಗೂ ಪುರಸ್ಕರಿಸುವುದಿಲ್ಲ. "ಅವುಗಳನ್ನು ನಮ್ಮ ಹರ್ಷವರ್ಧನಕ್ಕಾಗಿ ಬಳಸಲು ಯತ್ನಿಸಿ ಒಂದು ಹೊಸ ದೋಹಳ ಶಾಸ್ತ್ರವನ್ನು ಕಲ್ಪಿಸಬೇಕಲ್ಲವೆ? -ಎಂದು ಪ್ರಶ್ನಿಸುತ್ತಲೇ, ಅದಕ್ಕೆ ಉತ್ತರವನ್ನೂ ಅವರೇ ನೀಡುತ್ತಾರೆ. ಇಂದಿನ ಪೀಳಿಗೆಯನ್ನು ಮುತ್ತಿರುವ ಬೇಸರದಿಂದ ಪಾರಾಗಬೇಕಾದರೆ ನಾವು ನಮ್ಮ ಬಾಳನ್ನು ಬೇರೆಯ ತೆರ, ಈ ಯುಗಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ಬಳಸಬೇಕು" -ಎಂಬ ಸಲಹೆ ಸೂಚನೆಳನ್ನು ನೀಡುತ್ತಾರೆ.

ಪು.ತಿ.ನ. ಅವರು ಇಂತಹ ಒಂದು ತತ್ವದರ್ಶನದ ಹಿನ್ನೆಲೆಯಲ್ಲಿ ಯೋಚಿಸುವುದರಿಂದಲೇ ರಥಸಪ್ತಮಿ, ಗೋಕುಲಾಷ್ಟಮಿ, ಯುಗಾದಿ, ತಿರುನಕ್ಷತ್ರ, ದೇಗುಲ, ನಾರಾಯಣನ ಗುಡಿಯಲ್ಲಿ, ಶ್ರಿ ಕೃಷ್ಣ ಸ್ಮರಣೆ, ಕೃಷ್ಣ ಕೊಳಲಿನ ಕರೆ, ಆಂಜನೇಯ, ಅವತಾರಸಂಧ್ಯೆ ಮುಂತಾದ ಪ್ರಬಂಧಗಳನ್ನು ಲೇಖನಗಳನ್ನು ಬರೆಯಲು ಸಾಧ್ಯವಾಯಿತು. ದೇವರು, ಧರ್ಮ, ಹಬ್ಬ ಇತ್ಯಾದಿ ವಿಷಯಗಳ ಕುರಿತು ಎಷ್ಟು ಬಗೆಯಲ್ಲಿ ಆಲೋಚಿಸಿದರೂ ಬರೆದರೂ ಸಾಲದು, ಪ್ರಬಂಧ, ನಾಟಕ, ಕವಿತೆ, ಸ್ಪಂದನ ಇತ್ಯಾದಿ ಎಲ್ಲ ಮಾಧ್ಯಮಗಳಿಂದಲೂ ಇವುಗಳ ಕುರಿತು ಚಿಂತನೆ ನಡೆಸುತ್ತಾರೆ. ರಾಮ, ಕೃಷ್ಣ ಅವತಾರಗಳ ಮತ್ತು ಅವರ ಹೆಸರಿನಲ್ಲಿ ಆಚರಿಸುವ ಹಬ್ಬಗಳ ಕುರಿತು ಯಾರೇ, ಎಷ್ಟೇ, ರೀತಿಯಲ್ಲಿ ತರ್ಕಿಸಲಿ ವಿರೋಧಿಸಲಿ, ನಿರಾಕರಿಸಲಿ, ಪು.ತಿ.ನ. ಮನಸ್ಸು ಗಾಢ ನಂಬಿಕೆಯೊಂದಿಗೆ, ಸಮಾಧಾನ ಚಿತ್ರದೊಂದಿಗೆ ಸಮರ್ಥಿಸುವ, ಪುರಸ್ಕರಿಸುವ ತಿಳಿಸಿ ಕೊಡುವ ಪ್ರಯತ್ನದಲ್ಲಿರುತ್ತಾರೆ. ಅವರವರ ನಂಬಿಕೆ ಅವರವರಿಗೆ ನಿಜವಾದರೂ "ಸಾಧು ಭಕ್ತ-ಯೋಗಿಗಳ ಆತ್ಮಾನುಭೂತಿಗಳಿಂದ ದಿವ್ಯತೇಜೋಮಯನಾಗಿ ಉದಿಸಿಬರುವ ಆಶ್ಚರ್ಯಚರಿತನಾದ ಶ್ರೀ ಕೃಷ್ಣನಂಥ ಮಹಾಪುರುಷನನ್ನು ಬೌದ್ಧಿಕವಾದ ವಿಮರ್ಶೆಯಿಂದ ಅಳೆಯಲೆಳಸಿ ನಾವೇಕೆ ವೃಥಾ ಬಳಲೋಣ ? ಎನ್ನುವ ಮಾತುಗಳಲ್ಲಿ, ನಂಬಿಕೆ, ಶ್ರದ್ಧೆ, ವಿಶ್ವಾಸಗಳು ಮುಖ್ಯಾವಾಗಬೇಕೆ ಹೊರತು ಬುದ್ಧಿಯಲ್ಲ ಎನ್ನುವತಿಳಿವಳಿಕೆಯ ನಿರ್ದೇಶವಿದ್ದಂತೆ ತೋರುತ್ತದೆ."

ಇನ್ನು ಅವತಾರಗಳ ಬಗ್ಗೆ ಮಾತನಾಡುವಾಗಂತೂ ತಿಳಿಹಾಸ್ಯದೊಂದಿಗೆ, ದೇವರಿಗೂ ಅವತಾರ ತಾಳುವುದು ಕಷ್ಟವೇ. ಆದರೂ ಆವತಾರ ತಾಳಿ ಬರುವುದೇಕೆ ಎಂಬುದನ್ನು 'ಅವತಾರಸಂಧ್ಯಾ' ಎಂಬ ಲೇಖನದಲ್ಲಿ "ಭಗವಂತನಿಗೆ ನಮ್ಮನ್ನು ಕಂಡರೆ ತುಂಬ ಪ್ರೀತಿ. ನಾವು ಕೆಡುವುದನ್ನು ಆತ ಸಹಿಸಲಾರ. ಆತನಿಗೆ ತಾಪವೇನಾದರೂ ಇದ್ದರೆ ಅದು ವಾತ್ಸಲ್ಯದ ತಾಪ. ಈ ದಿವ್ಯ ತಾಪವೇ ಆತನಿಗೆ ವೈಕುಂಠದಲ್ಲಿ ತನ್ನ ಪಾಡಿಗೆ ತಾನು ನೆಮ್ಮದಿಯಾಗಿ ಇರುವುದನ್ನು ತಪ್ಪಿಸಿ ಭೂಮಿಗಿಳಿಸುತ್ತದೆ" ಎಂದು ಹಾಸ್ಯ, ವ್ಯಂಗ್ಯಗಳೊಂದಿಗೆ ಹೇಳುವುದು 'ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾನಾಂ' ಎಂಬ ಮಾತಿನ ಜಾಡಿನಲ್ಲಿಯೇ ಇದೆ. ಹೀಗಾಗಿ ರಾಮ-ಕೃಷ್ಣರ ಅವತರಣದ ಹಿಂದೆ ಲೋಕೋದ್ಧಾರ, ಲೋಕರಕ್ಷಣೆಯ ಉದ್ದೇಶವಿದೆ.

ಇಂತಹ ಒಂದು ಮನೋಭೂಮಿಯನ್ನು ಸಿದ್ಧ ಮಾಡಿಕೊಂಡೇ ಗೀತನಾಟಕಗಳಾದ ವಸಂತ ಚಂದನ, ದೀಪಲಕ್ಷ್ಮಿಗಳ ರಚನೆಯಾಗಿದೆ. 'ವಸಂತ ಚಂದನ' ನಾಟಕ ರಚನೆಗೆ ಪೂರ್ವಭಾವಿಯಾಗಿ, ಇದೇ ಹೆಸರಿನ ಪ್ರಬಂಧದಲ್ಲಿ ತಾತ್ವಿಕ ಸಿದ್ಧತೆಗಳು ನಡೆದಿವೆ.

ವಸಂತೋದಯ ಬೌದ್ಧಿಕ ಅರಿವಿಗೆ ನಿಖರವಾಗಿ ಬರದಿದ್ದರೂ, ನಮ್ಮ ಸುತ್ತಲ ಪ್ರಕೃತಿಯಲ್ಲಿ ಆಗುವ ಬದಲಾವಣೆಗಳಿಂದ ನಮ್ಮ ಅನುಭವಕ್ಕೆ ಅರಿವಿಗೆ ಬರುತ್ತದೆ ಎಂಬುದು ಪು.ತಿ.ನ. ಅವರ ಅಭಿಪ್ರಾಯ. ವಸಂತಾಗಮನದಿಂದ ಲೋಕವೆಲ್ಲ ತುಂಬುವ ಹರ್ಷೋಲ್ಲಾಸಗಳು ವಸಂತ, ಚಂದನೋತ್ಸವವಾಗಿ, ವಸಂತ ಪಂಚಮಿ ಹಬ್ಬವಾಗಿ ಆಚರಣೆಗೆ ಬರುವುದನ್ನು, ಬರಬೇಕಾದ್ದನ್ನು ಒತ್ತಿ ಹೇಳುತ್ತಾರೆ. ಹೊರಗಿನ ಪ್ರಾಕೃತಿಕ ಪರಿಸರದಲ್ಲಿ ಆಗುವ ಬದಲಾವಣೆಯ ಮೂಲಕದ ಸಂಭ್ರಮೋತ್ಸಾಹಗಳು ಅಂತರಂಗ ಜಗತ್ತಿನಲ್ಲಿಯೂ ಇದೇ ಬಗೆಯ ಪರಿಸರ ನಿರ್ಮಾಣಕ್ಕೆ ಕಾರಣವಾಗುತ್ತದೆ ಎನ್ನುವ ಪು.ತಿ.ನ. ಅವರ ನಂಬಿಕೆಯ ಪರಿಣಾಮವೇ ಗೀತನಾಟ್ಯಾಭಿವ್ಯಕ್ತಿ (ನಾಟಕಭಿವ್ಯಕ್ತಿ) ವಸಂತ ಚಂದನೋತ್ಸವದ ಕನಸಿನ ಸಾಕ್ಷಾತ್ಕಾರವೇ ಈ ಗೀತನಾಟಕ. ಭಾವುಕ ಸಹಚರಿ ಪಾತ್ರಗಳ ಮೂಲಕ ವಸಂತಾಗಮನದ ಹಿತದ ಅನುಭವ, ಅನುಭೂತಿ, ಹರ್ಷ ಉಲ್ಲಾಸಗಳು

'ವಸಂತ ಚಂದನೋತ್ಸವ'ದ ಆಚರಣೆಯಿಂದ ವಿನಿಮಯ ಮಾಡಿಕೊಳ್ಳ ಬೇಕಾದ ಅಗತ್ಯವನ್ನು ಎತ್ತಿ ಹಿಡಿಯುತ್ತಾರೆ.

ಧಾರ್ಮಿಕ ಚಿಂತನೆ, ಆಚರಣೆಗಳ ಮೂಲಸೆಲೆ ನಿಸರ್ಗವೇ ಆಗಿರುವುದರಿಂದ ಋತುಗಳ ಬದಲಾವಣೆಯೊಂದಿಗೆ ಹಬ್ಬ, ಉತ್ಸವಗಳು ಸಂಬಂಧ ಹೊಂದಿವೆ. ಮನುಷ್ಯ ಮತ್ತು ನಿಸರ್ಗದ ಬೆಸುಗೆ ಅನನ್ಯವಾದುದು. ಮನುಷ್ಯ ನಿಸರ್ಗದ ಕೂಸು, ಭೂಮಿ, ಬಾನು, ಮಳೆ-ಒಲಿದು ನೀಡಿದರೆ ಮನುಷ್ಯನ ಅಸ್ತಿತ್ವ ಇಲ್ಲವಾದರೆ ಮನುಷ್ಯನ ಅಸ್ತಿತ್ವವೇ ಇಲ್ಲ. ನಿಸರ್ಗ ಮೈದುಂಬಿ ನಲಿದಾಗ, ಕೈ ತುಂಬ ಕೊಟ್ಟಾಗ, ಮನದುಂಬಿ ನಕ್ಕಾಗ ಮನುಷ್ಯನ ಸಂತೋಷ, ಸಂಭ್ರಮಗಳಿಗೆ ಎಣೆಯಿಲ್ಲ. ತನ್ನ ಸಂತೋಷ ಸಂಭ್ರಮ, ಉತ್ಸಾಹ ನಿಸರ್ಗದ ಬಗೆಗಿನ ಕೃತಜ್ಞತೆಯನ್ನು ಹಬ್ಬ ಉತ್ಸವಗಳ ಮೂಲಕ, ವ್ರತನೇಮಗಳ ಮೂಲಕ ವ್ಯಕ್ತ ಪಡಿಸುತ್ತಾನೆ. ನಮ್ಮ ನವೋದಯ ಕವಿಗಳಂತೂ ನಿಸರ್ಗದ ಚೆಲುವಿನ ಒಂದೊಂದು ಮುಖವನ್ನೇ ಹುಚ್ಚೆದ್ದು ಬಣ್ಣಿಸಿದ್ದಾರೆ. ಸೂರ್ಯೋದಯ, ಚಂದ್ರೋದಯ, ಆಕಾಶ, ನಕ್ಷತ್ರ, ಮಿಂಚು, ಮಳೆ, ಮೋಡ, ಇಬ್ಬನಿ, ಭೂಮಿ, ಮರ ಗಿಡ ಬಳ್ಳಿ, ಋತುಮಾನಗಳು, ಕಡಲು, -ಹೀಗೆ ಯಾವುದನ್ನೂ ಬಿಡದೆ ಅವುಗಳ ಚೆಲುವನ್ನು ತಮ್ಮ ನಲಿವನ್ನು, ರಸಾಭಿಭೂತ ಸ್ಥಿತಿಯನ್ನೂ ಬಣ್ಣಿಸುತ್ತಾರೆ. ಪು.ತಿ.ನ. ಅವರೂ ಅದೇ ಪರಂಪರೆಯೊಂದಿಗೆ ನಂಟುಳ್ಳವರು. ಕೆಲವೊಮ್ಮೆ ನಿಸರ್ಗಸತ್ವಗಳೂ ಕೇವಲ ನಿಸರ್ಗವಾಗಿ ಚೆಲುವನ್ನು ಮಾತ್ರವೇ ಕಾಣಿಸುವುದಿಲ್ಲ. ಕವಿಗಳ ಮನಸ್ಸಿನ ಆಧ್ಯಾತ್ಮಿಕ, ಅನುಭಾವಿಕ ಸ್ಥಿತಿಗಳಿಗೆ ಒಡ್ಡಿದ ರೂಪಕಗಳಾಗಿ ಪ್ರತಿಮೆ, ಪ್ರತೀಕ, ಉಪಮೆಗಳಾಗಿ ಒದಗಿ ಬರುತ್ತವೆ. ಪೌರಾಣಿಕ ಸಂದರ್ಭಗಳಾಗಿ, ವ್ಯಕ್ತಿಗಳಾಗಿ ಕವಿ ಮನಸ್ಸುಗಳ ಮುಂದೆ ನಿಲ್ಲುತ್ತವೆ. ಅದರಲ್ಲಿಯೂ ಪು.ತಿ.ನ. ಅವರ ಕಣ್ಣು ನಿಸರ್ಗವನ್ನು ಪೌರಾಣಿಕ ಪ್ರಜ್ಞೆಯ ಒಸ್ಸೆಲಿಯೊಳಗೇ ಸೆರೆ ಹಿಡಿಯುತ್ತವೆ. ಮನಷ್ಯ ಲೋಕದಲ್ಲಿ ಸಿಗುವ (ಭೌತಿಕ ಸುಖದ ಮೂಲಕವಾಗಿ) ಸಂತೋಷೋಲ್ಲಾಸಗಳು ಕ್ಷಣಿಕ, ಮತ್ತು ಎಲ್ಲರಿಗೂ ಅಂತಹ ಸುಖದ ಪರಿಸರದಲ್ಲಿ- ಒಂದೇ ತೆರನಾದ್ದು. ಆದರೆ ವಸಂತದ ಚೆಲುವು- ವರ್ಷ ವೈಭವಗಳು, ಶರದ್ವಿಲಾಸ ಅವುಗಳಿಂದ ದೊರೆಯುವ ಆನಂದ ಅಲೌಕಿಕವಾದ್ದು, ಹೂವಿನ ವಿಕಸನ,

ಕೋಗಿಲೆಯ ಕೂಗು, ಹಕ್ಕಿಗಳ ಚಿಲಿಪಿಲಿ, ನದಿಯ ಜುಳು ಜುಳು-ನೀಡುವ ಮುದ ಅನಿರ್ವಚನೀಯ. ಆದ್ದರಿಂದಲೇ ಪು.ತಿ.ನ. ತಮ್ಮ ಗೀತನಾಟಕಗಳಾದ ವಸಂತ ಚಂದನ, ವರ್ಷ ಹರ್ಷಗಳಲ್ಲಿ, ಈ ಋತುಮಾನಗಳಲ್ಲಿ ನಿಸರ್ಗ ಕಾಣಿಸಿಕೊಳ್ಳುವ ಪರಿಯನ್ನು ಅದು ಉಂಟುಮಾಡುವ ಪರಿಣಾಮವನ್ನು ಮನೋಹರವಾದ ಗೀತಗಳ ಮೂಲಕ, ಸುಂದರವಾದ ಶಬ್ದ ಚಿತ್ರಗಳ ಮೂಲಕ ಹೃದಯಂಗಮವಾದ ಶೈಲಿಯಲ್ಲಿ ವಿವರಿಸಿದ್ದಾರೆ. ಕತೆಯ ಎಳೆಯೇ ಇಲ್ಲದೆ ಕೇವಲ ಗೀತಗಳೇ ಇಲ್ಲಿ ವಿಜೃಂಭಿಸಿ, ಕವಿ ಮನಸ್ಸಿಗಾದ ಸಂಭ್ರಮ ಸಂತೋಷಗಳನ್ನು ಜಗತ್ತಿಗೇ ಸಂವಹನವಾಗಿಸುವಲ್ಲಿ ಯಶಸ್ವಿಯಾಗಿವೆ. ಭಾವುಕ-ಸಹಚರಿ ಮೂಲಕ ಕವಿಯ ಆಶಯಗಳು ನಿಚ್ಚಳವಾಗಿ ಕಾಣಿಸಿಕೊಂಡಿವೆ. ನಿಸರ್ಗದ ಚೆಲುವಿಗೆ ಎಚ್ಚೆತ್ತುಕೊಂಡು ವಸಂತ ಚಂದನೋತ್ಸವದಲ್ಲಿ ಮಧು ಮಾಧವ ಮಧುರೋತ್ಸವದಲ್ಲಿ ಪಾಲುಗೊಳ್ಳುವುದರೊಂದಿಗೆ ನಾಟಕ ಮುಗಿಯುತ್ತದೆ.

ಪು.ತಿ.ನ. ಅವರ ನಂಬಿಕೆಯಲ್ಲಿ ನಿಸರ್ಗದ ಒಂದೊಂದು ಅಂಶವೂ ಮಾದಕ ಚೆಲುವಿನ ಬುಗ್ಗೆಯಂತೆ ಕ್ಷಣ ಕ್ಷಣವೂ ಬದಲಾಗುವ ಬಾನ ಬಣ್ಣ, ನೆಳಲು ಬೆಳಕಿನಾಟಗಳು ಕೂಡಾ ಆಸ್ತಿಕ ಮನದ ಕವಿಗೆ ಶ್ಯಾಮ-ಗೋಪಿಯರ ಕೂಟದಂತೆ ಕಾಣುತ್ತದೆ. ಸೂರ್ಯೋದಯದೊಂದಿಗೆ ಕ್ರಿಯಾ ಶೀಲವಾಗುವ ಚೈತನ್ಯ ಪೂರ್ಣವಾಗುವ ಜಗತ್ತು ಅವರಲ್ಲಿ ಬೆರಗು ಮೂಡಿಸುತ್ತದೆ ಮತ್ತು ಅದು ಅವರಿಗೆ

'ನಗವನೇರಿ ರವಿ ತೂರಿದ<br>
ನಗ್ನ ಜೀವ ಗೋಪಿಗೆ,<br>
ಸ್ವಸ್ವಭಾವ ವಸ್ತ್ರಗಳನು ನಾನಾ' ಎಂಬ ರೀತಿಗೆ-

ಎಂದು ಹಾಡಿ, ಸೂರ್ಯೋದಯದೊಂದಿಗೆ ಪ್ರತಿಯೊಂದು ಜೀವವೂ ತನ್ನದೇ ಆದ ವೈಯ್ಯಕ್ತಿಕ ಸ್ವಭಾವಗಳನ್ನು ಮರಳಿ ಪಡೆವುದೆಂಬುದನ್ನು ಗೋಪಿ ಕೃಷ್ಣರ ಪ್ರತಿಮೆಯ ಮೂಲಕ ಧ್ವನಿಪೂರ್ಣ ವಾಗಿಸಿದ್ದಾರೆ.

ವಸಂತ ಚಂದನೋತ್ಸವ ಸಂದರ್ಭದಲ್ಲಿ ಜೀವ ಚೇತನಗಳ ಅಸ್ತಿತ್ವ ಮುಕ್ತ ಸ್ಥಿತಿಯನ್ನು ತಲುಪುತ್ತದೆ. ಆದ್ದರಿಂದಲೇ ಅವರು ಇಂತಹ

ಉತ್ಸವಗಳು ಬದುಕಿನಲ್ಲಿ ಅನಿವಾರ್ಯವೆಂದು ನಂಬುತ್ತಾರೆ. ಒಂದು ಕಾಲಕ್ಕೆ ನಿಸರ್ಗಸಂಬಂಧಿ ಪರ್ವಗಳು, ಉತ್ಸವಗಳು ಬದುಕಿನ ಭಾಗವಾಗಿ ಇದ್ದವು. ಆದರೆ ಆಧುನಿಕತೆ ಮತ್ತು ನಾಗರೀಕತೆಯ ಮುನ್ನಡೆಯೊಂದಿಗೆ ಇಂತಹ ಪರ್ವಾಚರಣೆಗಳನ್ನು ಕೈ ಬಿಟ್ಟಿದ್ದೇವೆ, ಎನ್ನುವುದು ಅವರಿಗೆ ವಿಷಾದದ ಸಂಗತಿಯಾಗಿದೆ.

ಪ್ರಕೃತಿ, ಅಥವಾ ನಿಸರ್ಗ ಚಿಂತನೆಯು 'ವರ್ಷ ಹರ್ಷ' ದಲ್ಲೂ ಮುಂದುವರೆದಿದೆ. ವರ್ಷವೈಭವನ್ನು ಅದ್ಭುತ ಶಬ್ದ ಚಿತ್ರಗಳ ಮೂಲಕ ತಾದಾತ್ಮ್ಯತೆಯೊಂದಿಗೆ ವರ್ಣಿಸುತ್ತಾರೆ. 'ವಸಂತ ಚಂದನ' ದಲ್ಲಿನಂತೆ, ಇಲ್ಲಿ ಕವಿ ತರುಣ-ತರುಣಿ ಪಾತ್ರಗಳ ಮೂಲಕ ಶ್ರಾವಣ ಭಾದ್ರಪದ ಮಾಸಗಳಲ್ಲಿ ಭೋರ್ಗರೆದು ಸುರಿವ ಮಳೆಯ ವೈಭವ, ಭಾವುಕಮನಸ್ಸಿಗೆ ಕಾಣುವ ಸುಂದರ ದೃಶ್ಯಗಳನ್ನು ಓದುಗರ, ಪ್ರೇಕ್ಷಕರ ಬಗೆಗಣ್ಣಿಗೆ ಕಾಣುವಂತೆ ವಿವರಿಸಿದ್ದಾರೆ. ಇಂತಹ ಗೀತನಾಟಕಗಳಲ್ಲಿ ಚಿಂತನಾಂಶಕ್ಕಿಂತ, ಕಾವ್ಯಾಂಶ, ವರ್ಣನಾತ್ಮಕತೆಗಳೇ ಪ್ರಮುಖವಾಗಿವೆ.

ಅಬ್ಬರದ ಮಳೆಯ ಜೊತೆಗೇ ಬರುವ ಹಬ್ಬಗಳೂ ಕೂಡಾ 'ವರ್ಷ-ವೈಭವ' ತಂದುಕೊಡುವಷ್ಟೇ ಆನಂದವನ್ನು ತಂದು ಕೊಡುತ್ತವೆಂಬುದು ಗೀತನಾಟಕಕಾರನ ನಿಲುವು.

ವಸಂತ, ವರ್ಷಋತುಗಳಂತೆ ಶರದ್ ಋತುವೂ ಕವಿ ಕಲ್ಪನೆಗೆ ಗರಿ ತೊಡಿಸಿದೆ. ನಿಸರ್ಗದ ಚೆಲುವಿನಲ್ಲಿ ಶುಭದ ನೆರಳಿದೆ. ಸ್ವರ್ಗದ ಅವತರಣವಿದೆ. ಅದರಲ್ಲಿಯೂ ಕವಿ ಕಣ್ಣಿಗೆ ಶರದೃತು ಎಲ್ಲ ಋತುಗಳ ಸೌಭಾಗ್ಯದ ಸಂಗಮದಂತೆ ಕಾಣುತ್ತದೆ. ಈ ಋತುವಿನಲ್ಲಿ, ಸುತ್ತಲಿನ ನಿಸರ್ಗದಲ್ಲಿ ಕಾಣುವ ಸೌಮ್ಯ ಸೌಂದರ್ಯ ಸಿದ್ಧಚಾರಣ, ಗಂಧರ್ವ ಕಿನ್ನರ ಕಿಂಪುರುಷರು, ದೇವತೆಗಳು - ಮೊದಲಾದವರೆಲ್ಲರನ್ನೂ ಆಕರ್ಷಿಸುವಷ್ಟು ಪರಿಣಾಮಕಾರಿಯಾಗಿದೆ. ಇಲ್ಲಿಯೂ ಆನಂದೋತ್ಸಾಹಗಳ ವಾತಾವರಣವನ್ನು ನಿರ್ಮಿಸುವ ಪ್ರಕ್ರಿಯೆಯೇ ಕಾಣಬರುತ್ತದೆ. ಸ್ವರ್ಗದ ಚೆಲುವನ್ನೂ ಮೀರಿಸುವ ಶರದದ ಚೆಲುವು ದೇವಮಾನವರೆಲ್ಲರನ್ನೂ ಅಭಿಭೂತ ಸ್ಥಿತಿಗೆ ಕೊಂಡೊಯ್ಯುತ್ತದೆ. ಆಕಾಶದ ದಟ್ಟ ನೀಲಿಮೆ, ಮೋಡರಹಿತ ಶುಭ್ರಾಗಸ, ಮಧುಕರ ಗುಂಜನ, ಹಕ್ಕಿಗಳ ಕರ್ಣಮಂಗಳ

ಮಧುರ ಇಂಚರ, ಬಿಳಿ ನೀರ್ವಕ್ಕಿಗಳ ಒಡ್ಯಾಣ ತೊಟ್ಟ ಶಾಲಿವನಗಳು, ಶಾಂತಿಮಯ ಶಾದ್ವಲಗಳು, ವಜ್ರಹಾರಗಳನ್ನು ಧರಿಸಿಕೊಂಡಿರುವಂತೆ ಕಾಣುವ ಸರೋವರಗಳು - ಇತ್ಯಾದಿ ಸುಂದರ ಮಂಗಳ ದೃಶ್ಯಗಳು ಅಭೂತ ಪೂರ್ವ ಆನಂದಾನು ಭೂತಿಗೆ ಎಡೆಮಾಡಿಕೊಟ್ಟಿವೆ. ನಿರ್ಮಲ ಜಲದಲ್ಲಿ ಪ್ರತಿ ಬಿಂಬಿಸುವ ಸೂರ್ಯ ತೆರೆಗಳ ಜೊತೆರಾಸವಾಡುತ್ತಿರು ವಂತಿದೆ. ಪೊದೆಗಳ ಮೇಲೆದ್ದು ಕಾಣುವ ಹೂಗಳು, ಹಣತೆಗಳಂತೆ ಕಾಣುತ್ತವೆ-ಎಂದು ವರ್ಣಿಸುವ ಪು.ತಿ.ನ.ರ ವರ್ಣನಾ ಸಾಮರ್ಥ್ಯ, ಚಿತ್ರ ನಿರ್ಮಾಣ ಶಕ್ತಿ ಅನನ್ಯವಾಗಿದೆ. ಇಂತಹ ಅದ್ಭುತ ಚೆಲುವಿನ ದಿವ್ಯದರ್ಶನದಿಂದ ಉಂಟಾಗುವ ಮಹೋತ್ಸವಾನಂದದಲ್ಲಿ ಎಲ್ಲರೂ ಪಾಲ್ಗೊಳ್ಳಬೇಕೆಂಬ ಅವರ ಅಂತರಂಗದ ಅಭಿಲಾಷೆ ಭಾವುಕ, ಋತು ವಿಲಾಸಕೆ ಸಹಚರಿಯನ್ನು ಆಹ್ವಾನಿಸುವುದರಲ್ಲಿ ವ್ಯಕ್ತವಾಗಿದೆ.

ಪು.ತಿ.ನ. ಅವರಿಗೆ ಶಾಸ್ತ್ರಬದ್ಧವಾಗಿ, ರಂಗ ಪ್ರಯೋಗಕ್ಕಾಗಿ ನಾಟಕೀಯ ಅಂಶಗಳ ಕಡೆಗೆ ಹೆಚ್ಚಿನ ಎಚ್ಚರವಿರಿಸಿ ನಾಟಕಗಳನ್ನೋ, ಗೀತನಾಟಕಗಳನ್ನೋ ಬರೆಯಬೇಕೆಂಬ ಉಮೇದಿಗಿಂತ ತಮ್ಮ ಆದ್ಭುತ ಕಲ್ಪನಾಶಕ್ತಿ, ಸೌಂದರ್ಯಾನ್ವೇಷಕ ಪ್ರವೃತ್ತಿಗೆ ಮತ್ತು ರಸಾನುಭೂತಿ ಸ್ಥಿತಿಗೆ, ಕಲಾತ್ಮಕ ಜಿಜ್ಞಾಸೆಗೆ ವಿಸ್ತೃತ ಅಭಿವ್ಯಕ್ತಿ ಸಾಧ್ಯತೆಯನ್ನು ಕಂಡು ಕೊಳ್ಳುವುದೇ ಮುಖ್ಯವಾಗಿತ್ತು. ಆದ್ದರಿಂದ ತಂತ್ರ, ಸಂವಿಧಾನ ನಾಟಕೀಯತೆಗಳ ಕಡೆ ಹೆಚ್ಚು ಗಮನಕೊಡಲಿಲ್ಲ. ಆದ್ದರಿಂದಲೇ ಗೀತನಾಟಕಗಳು (ಕೆಲವನ್ನು ಹೊರತು ಪಡಿಸಿ) ಗೀತನಾಟಕಗಳಾಗದೆ ಸುಂದರ ಭಾವಗೀತಗಳ ಗೊಂಚಲುಗಳಾಗಿವೆ. ಅದರಲ್ಲಿಯೂ ವಸಂತ ಚಂದನ, ವರ್ಷ ಹರ್ಷ, ದೀಪಲಕ್ಷ್ಮಿ ಮೊದಲಾದವುಗಳು ಸಂಗೀತ ಚಿತ್ರಗಳಾಗಿ ಪರಿಣಮಿಸಿವೆ. 'ದೀಪಲಕ್ಷ್ಮಿ' ದೀಪಾವಳಿ ಹಬ್ಬದ ಆಚರಣೆ, ಅದರ ಮಹತ್ವ ಅದರ ಸಾಂಕೇತಿಕತೆಗಳನ್ನು ಹೇಳುವುದಕ್ಕೆ ಹೊರಡುತ್ತಲೇ ಕಾರ್ತಿಕ ಮಾಸದಲ್ಲಿ ಪ್ರಕೃತಿ ಬದಲಾವಣೆಯ ಅಂಶಗಳನ್ನು ಸೂಕ್ಷ್ಮವಾಗಿ ಸೂಚಿಸುತ್ತಾರೆ. ಇಲ್ಲಿ 'ದೀಪಾವಳಿ' ಹಬ್ಬದ ಆಚರಣೆಯ ಹಿಂದಿನ ಉದ್ದೇಶವನ್ನು ಹೇಳುವಾಗ Flash back ತಂತ್ರದ ಮೂಲಕ, ಮತ್ತೆ ಕೃಷ್ಣನ ನೆನಪನ್ನು ತರುತ್ತಾರೆ. ಅಲ್ಲದೆ ಈ ಅವಕಾಶವನ್ನು ತಮ್ಮ ಕೃಷ್ಣ ಪ್ರೀತಿಯ, ಭಕ್ತಿಯ ಅಭಿವ್ಯಕ್ತಿಗೆ ಬಳಸಿಕೊಳ್ಳುತ್ತಾರೆ. 'ಆರೇ ಮೋಹನ ಇವನಾರೆ ಮೋಹನ, ಚೆಲ್ಲಿಽರಳನು

ಸಂವನವ, ಪದುಮನಾಭನ ಹೃದಯ ವಿಹಾರಿಣಿ' ಮುಂತಾದ ಹಲವಾರು ಗೀತೆಗಳ ಮೂಲಕ ಕೃಷ್ಣನ ಸೌಂದರ್ಯ, ಸಾಹಸಗಳನ್ನು ಮುಕ್ತಕಂಠದಿಂದ ವರ್ಣಿಸುತ್ತಾರೆ.

ಶ್ರೀಕೃಷ್ಣ ಚಕ್ರಕ್ಕೆ ಬಲಿಯಾದ ನರಕಾಸುರನ ನೆನಪಿನಲ್ಲಿ ನರಕ ಚತುರ್ದಶಿಯಾಗಿ, ಚಕ್ರದ ಉರಿವ ಬೆಂಕಿ ತಣಿದು ಸೌಮ್ಯವಾದುದನ್ನು ದೀಪಾವಳಿಯಾಗಿ ಆಚರಣೆಗೆ ಬಂದುದನ್ನು ವಿವರಿಸುತ್ತಾರೆ.

ಭಾವುಕ ಸಹಚರಿಯರ ಬಗೆಗಣ್ಣಿನಲ್ಲಿ ನರಕಾಸುರನ ಅಂತಃ ಪುರದ ಸೆರೆಮನೆ, ಸೆರೆಯಾದ ರಾಜಕುಮಾರಿಯರು, ಗರುಡವಾಹನನಾಗಿ ಬಂದ ಶ್ರೀ ಕೃಷ್ಣ- ಇತ್ಯಾದಿ ವಿವರಗಳೊಂದಿಗೆ ಒಂದು ಪೌರಾಣಿಕ ಸನ್ನಿವೇಶ ಮೂಡಿ ನಿಲ್ಲುತ್ತದೆ.

ಅಧರ್ಮದ ಮೇಲೆ ಧರ್ಮದ ವಿಜಯ, ಮಿಥ್ಯೆಯ ಮೇಲೆ ಸತ್ಯದ ವಿಜಯ, ಹಿಂಸೆಯ ಮೇಲೆ ಅಹಿಂಸೆಯ ವಿಜಯವನ್ನು ಎತ್ತಿ ಹಿಡಿಯುವ ಪುರಾಣ, ಕಾವ್ಯಗಳು ನಮ್ಮ ಕಾವ್ಯ ಪರಂಪರೆಯಲ್ಲಿ, ಸಾಕಷ್ಟು ಇರುವಂತೆ, ಕತ್ತಲಿನ ಮೇಲೆ ಬೆಳಕಿನ ವಿಜಯವನ್ನು ಧ್ವನಿಸುವಂತೆ, ಶ್ರೀ ಕೃಷ್ಣನಿಂದ ನರಕಾಸುರನ ಸಂಹಾರದ ಕಥಾ ಪ್ರಸಂಗ, ದೀಪಾವಳಿ ಹಬ್ಬದ ಆಚರಣೆಯ ಅವಧಿಯಲ್ಲಿ ಪುನಃ ಸೃಷ್ಟಿಯಾಗಿದೆ. ಭಾವುಕ ಸಹಚರಿಯರು ಪಾರವಶ್ಯತೆಯಲ್ಲಿ ಆ ಅಂದಿನ ಸನ್ನಿವೇಶದಲ್ಲಿ ತೊಡಗಿಸಿಕೊಂಡು, ದಿವ್ಯ ಸುಂದರ ಮೂರ್ತಿ ಶ್ರೀಕೃಷ್ಣನ ದರ್ಶನ ಪಡೆದು ಅವನಿಂದ ಮುಕ್ತರಾದ ರಾಜಕುಮಾರಿಯರ ಅಪ್ಸರೆಯರ ಮಹದಾನಂದ ಪೂರಿತವಾದ ಶ್ರೀ ಕೃಷ್ಣ ಪೂಜೆ, ಒಸಗೆ, ಮಂಗಳಾರತಿಯಲ್ಲಿ ಪಾಲ್ಗೊಂಡು, ಭವದೆಚ್ಚರದೊಂದಿಗೆ 'ದೀಪೋತ್ಸವ' ಸಂಭ್ರಮದಲ್ಲಿ ಪಾಲ್ಗೊಳ್ಳುವಂತೆ ಚಿತ್ರಿಸಿರುವ ಪು.ತಿ.ನ.ರು ಏಕಕಾಲದಲ್ಲಿ ಆಸ್ತಿಕ ತೃಷೆಯನ್ನೂ ಕಾವ್ಯ, ಸಂಗೀತ ತೃಷೆಯನ್ನೂ ತಣಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ಪು.ತಿ.ನ. ಅವರು ಪ್ರಕೃತಿಯ ಚೆಲುವನ್ನೂ ಆಸ್ತಿಕ ಮನಸ್ಸಿನೊಂದಿಗೇ ಪರಿಭಾವಿಸುತ್ತಾರೆ. ಅದನ್ನು ವರ್ಣಿಸುವಾಗಲೂ ಆರಾಧನಾ ಮನೋಭಾವವೇ ಸ್ಥಾಯಿಯಾಗಿ ಕೆಲಸಮಾಡುತ್ತದೆ. ಆಧುನಿಕತೆ.

ಪ್ರಗತಿಪರತೆಗಳೊಂದಿಗೆ ಮುಖಾಮುಖಿ ಘರ್ಷಣೆಯಿಲ್ಲ. ಉತ್ತಮವಾ
ಎಲ್ಲ ಅಂಶಗಳನ್ನೂ ವಿರೋಧವಿಲ್ಲದೆ ಸ್ವೀಕರಿಸುತ್ತಾರೆ.

ಅವುಗಳನ್ನು ಚಿಂತನ ಪ್ರಕ್ರಿಯೆಯಲ್ಲಿ ಅಳವಡಿಸಿ ಕೊಳ್ಳುವಾ
ತಾವು ನಂಬಿಕೊಂಡು ಬಂದ ದೇವರು, ಧರ್ಮ, ಸಾಂಪ್ರದಾಯಿಕತೆ
ಪೌರಾಣಿಕ ನಿಷ್ಠೆ ಪ್ರಾಚೀನ ಸಂಸ್ಕೃತಿ, ತಾವು ಪಡೆದ ಸಂಸ್ಕಾರಗಳನ್
ಬಿಟ್ಟು ಕೊಡುವುದಿಲ್ಲ; ಅವುಗಳೊಂದಿಗೆ ರಾಜಿಮಾಡಿಕೊಳ್ಳುವುದಿಲ್ಲ
ಹಾಗೆಂದು ಪು.ತಿ.ನ. ಅವರಿಗೆ ಸಾಮಾಜಿಕ, ರಾಜಕೀಯ ಪ್ರಜ
ಇಲ್ಲವೆಂದಲ್ಲ. ಆದರೆ ಇಂತಹ ಪ್ರಜ್ಞೆಯನ್ನು ಸೃಜನಕ್ರಿಯೆಗೆ ಹೂ
ವಾಗಲೂ ಬೌದ್ಧಿಕ, ವೈಚಾರಿಕ ನಿಷ್ಠುರತೆಗಳನ್ನು ಬದಿಗಿಟ್ಟು ವಾಸ್ತವಗಳನ್ನು
ಸಮಸ್ಯೆಗಳನ್ನು ಸಂಯಮಶೀಲತೆಯೊಂದಿಗೆ ನವಿರಾದ ಭಾಷೆಯ
ಮೂಲಕವೇ ಚರ್ಚೆಗೆ ತೆಗೆದುಕೊಳ್ಳುತ್ತಾರೆ, ವಿಶೇಷವಾಗಿ ಗೀತ
ನಾಟಕಗಳಲ್ಲಿ ಹೆಸರಿಗೆ ಸಾಮಾಜಿಕವೆನಿಸಬಹುದಾದ ದೋಣಿಯ ಬಿನದ
ಮತ್ತು 'ಕವಿ' ಗೀತನಾಟಕಗಳಲ್ಲಿ ಸಾಮಾಜಿಕಕತೆಯ ಎಳೆಯೊಂದು
ಮಾತ್ರವೇ ಇದ್ದು, ಮನುಷ್ಯ ಮತ್ತು ನಿಸರ್ಗ ಸಂಬಂಧಿ ಚಿಂತನೆಯೇ
ಮುಂದುವರೆಯುತ್ತದೆ.

'ಅಹಲ್ಯೆ' ನಾಟಕದ ರಚನೆಯ ಸರಿ ಸುಮಾರಿನಲ್ಲೇ ರಚಿತವಾದ
ಈ ಎರಡೂ ಕೃತಿಗಳು, ಹಿಂದಿನ ನಾಟಕಗಳಲ್ಲಿ ಕಂಡ ಅವರ ನಿಸರ್ಗ
ಪ್ರೀತಿಯನ್ನೇ ಬಿಂಬಿಸುತ್ತವೆ. ನಿಸರ್ಗದೊಂದಿಗೆ ಮನುಷ್ಯನದು
ಅವಿನಾಭಾವ ಸಂಬಂಧ. ಅವನ ಹುಟ್ಟು ಸಾವುಗಳು, ಬದುಕಿನ ಅಸ್ತಿತ್ವಗಳು
ನಿರ್ಧರಿತವಾಗುವುದು ನಿಸರ್ಗದಿಂದಲೇ. ಅದರಿಚ್ಛೆಗೆ ವಿರೋಧವಾಗಿ
ಮನುಷ್ಯ ಬಾಳಲಾರ ಎನ್ನುವ ತಾತ್ವಿಕ ಚಿಂತನೆಯ ಹಿನ್ನೆಲೆಯಲ್ಲಿ
'ದೋಣಿಯ ಬಿನದ'ದ ರಚನೆಯಾಗಿದೆ. ನವ ತಾರುಣ್ಯದಲ್ಲಿದ್ದ ಯವಕ,
ಯುವತಿಯರು ದೋಣಿಬಿನದದಲ್ಲಿ ಮೈ ಮರೆತಿದ್ದರೂ ಅವರ ಮಧ್ಯೆ
ಯುವಕನೊಬ್ಬ ಬದುಕಿನ ಬಗೆಗೆ ಜಗುಪ್ಸೆ ತಳೆದು ನೀರಿನಲ್ಲಿ ಧುಮುಕಿ
ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆದರೆ ಅಲೆಗಳು ಅವನನ್ನು ಸಾಯಬಿಡದೆ
ದಡಕ್ಕೆ ತಳ್ಳುತ್ತವೆ. ಬಿನದಿಗಳಲ್ಲಿದ್ದ ನವತರುಣಿಯರೊಬ್ಬಳು ಅವ್ಯಕ್ತ
ಬಯಕೆಯ ಅರಕೆಯಿಂದ ನರಳುತ್ತ ಕನಸಿನ ಪ್ರಿಯಕರನ ಕಲ್ಪನೆಯಲ್ಲಿ ಮೈ

ಮರೆಯುತ್ತಿದ್ದವಳ ಕಣ್ಣಿಗೆ ಜೊಂಡಿನ ನಡುವೆ ಸಿಕ್ಕಿ ಬಿದ್ದಿದ್ದ ತರುಣನು ಕಾಣಿಸಲು ಅವನಲ್ಲಿ ಅನುರಕ್ತಳಾಗಿ, ಬಾಳಸಂಗಾತಿಯಾಗಿ ಆರಿಸಿ ಕೊಳ್ಳುತ್ತಾಳೆ.

ತೆಳುವಾದ ಈ ಕತೆ ಪು.ತಿ.ನ. ಅವರ ತಾತ್ವಿಕ ಚಿಂತನೆಗೆ ನೀಡಿದ ವ್ಯಾಖ್ಯಾನದಂತಿದೆ. ಇಲ್ಲಿನ ನಿಸರ್ಗ ಜಡವಲ್ಲ. ಚೇತನಾರೋಪಿತ ಪಾತ್ರಗಳಾಗಿ ನಿಸರ್ಗ ಸತ್ವಗಳು ಕಾಣಿಸಿ ಕೊಳ್ಳುತ್ತವೆ. ಮನುಷ್ಯ ಮತ್ತು ಪ್ರಕೃತಿಯ ಸಂಬಂಧಗಳ ಸ್ವರೂಪವನ್ನು ಯಾವುದೇ ಕ್ಲೀಷೆಯಿಲ್ಲದೆ. ಸಂಕೀರ್ಣತೆಗೆ ಎಡೆಯಿಲ್ಲದೆ ಸುಲಭಗ್ರಾಹ್ಯ ಭಾಷೆಯ ಮೂಲಕ ಸೂಕ್ಷ್ಮವಾಗಿ ವಿವೇಚಿಸುತ್ತಾರೆ. ಪ್ರಕೃತಿ ವಿನಾಕಾರಣ ಮನುಷ್ಯನ ಸಾವನ್ನು ಬಯಸುವುದಿಲ್ಲ, ಆಯಸ್ಸು ಮುಗಿಯದೆ, ಕಾಲ ಮಾಗದೆ, ಜೀವ ಅಪಮೃತ್ಯುವಿಗೆ ಒಳಗಾಗುವುದಿಲ್ಲ. -ಎನ್ನುವ ಬಲವಾದ ನಂಬಿಕೆ; ಅಭಿಪ್ರಾಯಕ್ಕೆ ಅಂಟಿಕೊಂಡವರು, ಪು.ತಿ.ನ. ಇದಕ್ಕೆ ಪೂರಕ ವಾಗುವಂತೆಯೇ ಕಥಾ ಸಂದರ್ಭ, ಸನ್ನಿವೇಶಗಳ ನಿರೂಪಣೆ. ಯುವಕ ಬದುಕಿನ ಬಗ್ಗೆ ಬೇಸರಗೊಂಡು, ಸಾವಿನಲ್ಲಿ ಸಮಾಧಾನವನ್ನು ಬಯಸುತ್ತಾನೆ. ಅಷ್ಟೇ ಅಲ್ಲ, ಅವನ ಮನದ ದುಗುಡ, ದುಮ್ಮಾನಗಳು ಹಲವಾರಿವೆ. ಅವುಗಳನ್ನು ಅನಾವರಣಗೊಳಿಸಲು, ಇಲ್ಲಿ ಪು.ತಿ.ನ. ಜಲಕನ್ಯೆಯರನ್ನು ಬಳಸಿ ಕೊಳ್ಳುತ್ತಾರೆ. ಅವರ ಮೂಲಕ ಅವನ ಮನದಾಳದ ಸಂಕಟ ತಳಮಳಗಳನ್ನು ಹೊರಗೆಡಹುವಂತೆ ಮಾಡಿದ ಪ್ರಯತ್ನ, ಅಲೆಗಳೇ ಜಲಕನ್ಯೆಯರಾಗುವುದು, ಅವರ ಅದ್ಭುತ ಪ್ರತಿಭೆಗೆ ಸಾಕ್ಷಿಯಾಗಿದೆ.

"ಈ ಜೀವದ ರಸಬಹು ಕಟು
ನಮ್ಮ ಉಣಿಸಿಗೆ
ಅತಿಮಾಗಿದೆ ಸ್ವಾದುವಲ್ಲ
ನಮ್ಮ ತಿನಿಸಿಗೆ
ಸಾವ ಕಾಲಕುಳಿವ ಆಸೆ
ಇವಗೆ ಬಲಿಯಿತು
ಅದಕೆ ಪ್ರಾಣವಗ್ನಿ ನಮಗೆ

ದಕ್ಕದುಳಿಯಿತು.
ಕಾರುಮೋಡ ಪೆರೆಯನಗಿದು
ಉಗುಳುವಂತೆಯೇ
ಸಾವೀತನನುಗುಳಿ ನಡೆವ
ದಡದೊಳಂತೆಯೇ"

(ದೋ,ಬಿ, ಮತ್ತು ಕವಿ-ಪುಟ.3)

-ಎಂದು ಹೇಳಿಕೊಳ್ಳುವ ಜಲಕನ್ಯೆಯರ ಮಾತಿನಿಂದ, ಆತ್ಮಹತ್ಯೆ ಮಾಡಿಕೊಂಡರೂ ಸುಪ್ತಜೀವನಾಕಾಂಕ್ಷೆ, ಅಲೆಗಳೆಂಬ ಜಲಕನ್ಯೆಯರ ಕೈಯಿಂದ ಉಳಿಸುತ್ತದೆ. ಈ ಆಕಾಂಕ್ಷೆಗೆ ಆಕಸ್ಮಿಕ ಪ್ರೀತಿ, ಸಾಂಗತ್ಯಗಳು ದೊರೆತು, ನಾಟಕ ಸುಖಾಂತವಾಗುತ್ತದೆ.

ಪ್ರಕೃತಿಯ ರಮ್ಯಚಿತ್ರಗಳು, ದೋಣಿಯ ಬಿನದಿಗರ ಉಲ್ಲಾಸೋತ್ಸಾಹಗಳು, ಕೀಟಲೆ ವ್ಯಂಗ್ಯಗಳು-ಇವೇ ಇಲ್ಲಿನ ಕಲಾತ್ಮಕ ಅಂಶಗಳಾಗಿವೆ.

'ಕವಿ' ನಾಟಕದ ವಿಷಯಕ್ಕೆ ಬಂದಾಗಲಂತೂ ಸ್ವತಃ ಕವಿಯಾದ ಪು.ತಿ.ನ. ಅವರ ಕಾವ್ಯ ಮೀಮಾಂಸಾ ಪ್ರಜ್ಞೆ, ಕವಿ,ಸಹೃದಯ- ಕಾವ್ಯ ಕರ್ಮ, ಪ್ರತಿಭೆ ಸ್ಫೂರ್ತಿ, ಕವಿ ಸಾಮರ್ಥ್ಯಗಳು, ರಸಾನುಭೂತಿ- ಇತ್ಯಾದಿ ಎಲ್ಲ ಕಾವ್ಯ ಸಂಬಂಧಿ ಪರಿಕಲ್ಪನೆಗಳ ಚಿಂತನೆ ನಡೆಯುತ್ತದೆ. ಕವಿಗೆ ಎರಡು ಮುಖಗಳಿವೆ, ಎರಡು ವ್ಯಕ್ತಿತ್ವಗಳಿವೆ. ಅವನೂ ಕೂಡಾ ಎಲ್ಲರಂತೆ ಸಾಮಾನ್ಯ ಮನುಷ್ಯನೇ ಆದರೂ ಕಾವ್ಯ ಸಮಾಧಿಗಿಳಿದಾಗ ಸಂಪೂರ್ಣ ವಾಗಿ ಭಿನ್ನನಾಗುತ್ತಾನೆ. ಅವನಿಗೆ ಕಾವ್ಯ ಸಾಕ್ಷಾತ್ಕಾರವಾಗಲು ನಿಸರ್ಗವೇ ಪ್ರಮುಖ ಪ್ರೇರಣೆ, ಪ್ರಚೋದನೆ ಎಂದು ಸ್ವಾನುಭವದ ಮೂಲಕ ತಳೆದ ನಿಲುವು ಅವರದಾಗಿದೆ. ಅಲ್ಲದೆ ಅವರ ನಿಸರ್ಗ ಪ್ರೀತಿಯ ತೀವ್ರತೆಯಿಂದ ಬದುಕಿನ ಹಲವಾರು ಸತ್ಯಗಳ ಸಾಕ್ಷಾತ್ಕಾರವಾಗಿದೆ, ದಿವ್ಯಾನುಭೂತಿಗಳು ಅವರಿಗೆ ಸಾಧ್ಯವಾಗಿದೆ. ಆದ್ದರಿಂದಲೇ 'ನಿಸರ್ಗ'ವನ್ನು ಕೇಂದ್ರ ಪ್ರಜ್ಞೆಯಾಗಿರಿಸಿಕೊಂಡು ಹಲವು ಗೀತನಾಟಕಗಳನ್ನು ರಚಿಸಿ, ನಿಸರ್ಗ ಸೌಂದರ್ಯದ ಹಲವು ಮುಖಗಳನ್ನು ಪರಿಚಿಯಿಸಿರುವರಾದರೂ, ಈ ನಾಟಕದಲ್ಲಿ ನಿಸರ್ಗದ ವರ್ಣನೆ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ, ಕಾವ್ಯ ತತ್ವಗಳ ದರ್ಶನಕ್ಕಾಗಿ ಬಂದಿದೆ. ಪ್ರಕೃತಿ ಮತ್ತು ಮನುಷ್ಯ ಸಂಬಂಧ

ಅನಾದಿಕಾಲದಿಂದ ಸಾಗಿಬಂದಿದೆ. ಪ್ರಕೃತಿಯ ವಿವಿಧ ಆತ್ಮಗಳು (ಚೇತನಗಳು) ಒಂದಾಗಿ ಮಾನವನ ಸೌಂದರ್ಯ ತೃಷೆಯನ್ನು ತಣಿಸುವ ಕ್ರಿಯೆಯಲ್ಲಿ 'ಚೆಲುವಾಗಿ' 'ಸೌಂದರ್ಯ'ವಾಗಿ ಮೈತಳೆಯುವ ಅಂಶವನ್ನೂ, ಸೃಷ್ಟಿ ಜಗತ್ತಿನ ವಿಕೃತ ಪದರಗಳಲ್ಲಿ ಮೌನವಾಗಿ, ಅಗೋಚರವಾಗಿ ಹುದುಗಿರುವ ಶಿವದ ಅನುಭೂತಿಯನ್ನು ಸಕಲ ಚೇತನರೊಳಗೂ ಅನುಭೂತವಾಗುವಂತೆ ಮಾಡಿ ಚಿದಾನಂದದ ಸವಿಯನ್ನುಣಿಸಬಲ್ಲ ಕವಿ ಸಾಮರ್ಥ್ಯವನ್ನು ನಿರೂಪಿಸುವುದೇ ಇಲ್ಲಿನ ಉದ್ದೇಶವಾಗಿದೆ. ಲೋಕದ, ವಾಸ್ತವ ಬದುಕಿನ ಜೊತೆಗಿದ್ದು, ಅದರಿಂದ ಮೀರಿದ ಎತ್ತರಕ್ಕೇರಿ 'ರಸಜಾಗರ' ಸ್ಥಿತಿಯಲ್ಲಿ ಪಡೆದ ಮಹಾನುಭವಕ್ಕೆ ಕರಣಗೋಚರವಾದ ಅಭಿವ್ಯಕ್ತಿಯನ್ನು ಕೊಡುವ ಆತನ 'ಕಾವ್ಯ ಕರ್ಮ' ಅತ್ಯಂತ ಮಹತ್ವದ್ದು. ಈ ಬಗೆಯ ಮಹತ್ಕಾರ್ಯಗಳನ್ನು ಸಾಧಿಸುವ ಕವಿಯ ಅಂತರ್ದೃಷ್ಟಿಗೆ ಸಮಸ್ತ ಜಗತ್ತೂ ಉನ್ಮೀಲನ ಗೊಳ್ಳುತ್ತದೆ. ಅಪಾರವಾದ ಕಾವ್ಯ ಜಗತ್ತಿನ ಸೃಷ್ಟಿಕರ್ತನಾದ ಕವಿ ನೀತಿ ನಿಯಮಗಳಿಗೆ ಬದ್ಧನಾಗಿ ಉಳಿಯ ಬೇಕಾಗಿಲ್ಲವೆಂಬ ಭಾರತೀಯ ಕಾವ್ಯ ಮೀಮಾಂಸಕರಿಗೆ ಕವಿಯ ಅಸಾಮಾನ್ಯ ಪ್ರತಿಭೆ, ಸಾಮರ್ಥ್ಯಗಳ ಬಗ್ಗೆ ಇದ್ದ ನಂಬಿಕೆ ನುಡಿಗೊಳ್ಳುವಂತೆ, ಮಾನವ ಬದುಕನ್ನು ನಿಯಂತ್ರಿಸಬಲ್ಲ ಪ್ರಕೃತಿಯ ವಿವಿಧ ಚೇತನಗಳು, ತಮ್ಮ ತಮ್ಮ ಸಮಸ್ಯೆಗಳಿಗೆ ಉತ್ತರವನ್ನು ಕವಿಯಿಂದ ತಿಳಿದು ಕೊಳ್ಳಲು ಬರುವ ಸನ್ನಿವೇಶ ನಿರ್ಮಾಣ ಪು.ತಿ.ನ.ರ ಕವಿ ಕಾವ್ಯ ದೃಷ್ಟಿಗಳನ್ನು ಬಿಂಬಿಸುವುದೇ ಅಲ್ಲದೆ, ಸೃಷ್ಟಿಯಲ್ಲಿನ ಸಮಸ್ತ ಜೀವ ಚೇತನಗಳ ಸಮಸ್ಯೆಗಳಿಗೇ ಪರಿಹಾರ ಸೂಚಿಸಬಲ್ಲ, ಅವುಗಳ ಅನುಮಾನಗಳಿಗೆ ಸಮಾಧಾನಗಳನ್ನು ನೀಡಬಲ್ಲ ಶಕ್ತಿ ಕವಿಗೆ ಮಾತ್ರಸಾಧ್ಯ. -ಎಂಬ ನಂಬಿಕೆಯ ಸೂಚನೆಯೂ ಇದೆ.

ಈ 'ಕವಿ' ನಾಟಕದ ಹಿಂದೆ ಕಾವ್ಯ, ರಸ ಸಿದ್ಧಾಂತಗಳ ಬಗ್ಗೆ ನಡೆಸಿದ ಸುದೀರ್ಘ ಚಿಂತನೆಗಳಿವೆ. 'ರಸಸರಸ್ವತಿ' ಕೃತಿಯಲ್ಲಿ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ಅನೇಕ ಅಂಶಗಳ ಬಗ್ಗೆ ಗಂಭೀರವಾದ ಲೇಖನಗಳಿವೆ. 'ಕಾವ್ಯದ ಜೀವಾಳ' (ಮುನ್ನುಡಿಯ ಭಾಗ) ರಸಸ್ತರ ಸೋಪಾನ, ರಸಸ್ವರೂಪ, ಕಾವ್ಯ ಪ್ರಯೋಜನ, ಕವಿ, ಸಹೃದಯ, ಕವಿಯ ಆನಂದಾನುಭೂತಿ. ಅಸಂಭಾವ್ಯತೆಯಿಂದ ಕಾವ್ಯಕ್ಕೆ ಬರುವ ರಮ್ಯತೆ, ಕಾವ್ಯ

ಮತ್ತು ಸೌಂದರ್ಯ-ಇತ್ಯಾದಿ ಕುರಿತು ಅನೇಕ ಲೇಖನಗಳಲ್ಲಿ ತಮ್ಮ ಕಾವ್ಯ ಸಂಬಂಧಿ ಚಿಂತನೆಗಳನ್ನು ಅಭಿವ್ಯಕ್ತಿಸಿದ್ದಾರೆ. ಈ ಲೇಖನಗಳು ಬಿಡಿ ಬಿಡಿ ಚಿಂತನೆಗಳನ್ನು ಒಳಗೊಂಡಿದ್ದರೆ, 'ಕವಿ' ಗೀತನಾಟಕ, ಒಂದು ಸಣ್ಣದಾದ ಕತೆಯ ಎಳೆಯನ್ನು ಇರಿಸಿಕೊಂಡು ಅದರ ಚೌಕಟ್ಟಿನಲ್ಲಿ ಕಾವ್ಯ ಚಿಂತನೆಯ ಹಲವು ಮುಖಗಳನ್ನು ಪರಿಚಯಿಸುತ್ತದೆ.

ನಾಟಕದ ಕ್ರಿಯೆಯ ಜೊತೆ ಜೊತೆಗೇ 'ಕಾವ್ಯ'ತತ್ವಗಳ ಅನಾವರಣ ಪಾತ್ರ, ಸನ್ನಿವೇಶಗಳ ಮೂಲಕ ಸಾಧ್ಯವಾಗಿಸಿದ್ದಾರೆ. ಪ್ರಧಾನವಾಗಿ, ಕಾವ್ಯ ಸೃಷ್ಟಿಯ ಮೂಲದಲ್ಲಿರುವ ಚೆಲುವು ಅಥವಾ ಶಿವ ಅಥವಾ ಸೌಂದರ್ಯ ಸಾಕ್ಷಾತ್ಕಾರಕ್ಕೆ ಬೇಕಾದ ಅನಿವಾರ್ಯ ಮನಃ ಸ್ಥಿತಿ, ದೃಷ್ಟಿ ಅಥವಾ ಭಾವಸಿದ್ಧತೆಯ ಸ್ವರೂಪವನ್ನು ವಿವರಿಸುವ ಆಶಯವನ್ನು ಹೊಂದಿದೆ, ಈ ನಾಟಕ.

'ಕವಿ'ಯೇ ಈ ನಾಟಕದ ಮುಖ್ಯ ಪಾತ್ರ. ಆದರೆ ಈ 'ಕವಿ' ವ್ಯಕ್ತಿತ್ವದ ಉನ್ಮೀಲಿನಕ್ಕೆ ಸಹಾಯಕರಾಗಿ ಬಿನದಿಗರು, ಕವಿ ಹೆಂಡತಿ, ಯಕ್ಷ ಮೊದಲಾದ ಪಾತ್ರಗಳೂ ಕೂಡಾ ಮುಖ್ಯರಾಗುತ್ತಾರೆ. 'ಕವಿ' ಕಾವ್ಯ ಕರ್ಮದ ಕ್ಷಣಗಳಿಂದ ಹೊರಗೆ ಇದ್ದಾಗ ಅವನೂ ಒಬ್ಬ ಸಾಮಾನ್ಯ ಮನುಷ್ಯ ಎಲ್ಲ ಮನುಷ್ಯರಿಗಿರುವಂತಹ ಸಮಸ್ಯೆಗಳೇ ಅವನನ್ನೂ ಕಾಡುತ್ತವೆ ಎನ್ನುವುದನ್ನು ಹೆಂಡತಿ ಪಾತ್ರದ ಮೂಲಕವೂ. ಕವಿಗಿರುವ ಅದ್ಭುತ, ಅಲೌಕಿಕ, ಸೃಜನಶೀಲ ಶಕ್ತಿ ಸಾಮರ್ಥ್ಯಗಳನ್ನು 'ಯಕ್ಷ' ಪಾತ್ರದ ಮೂಲಕವೂ ವ್ಯಂಜಿಸುತ್ತಾರೆ.

'ಶಿವವಾಣಿಗೇ ಹೊಳಲೀಯುವ' ಸಾಮರ್ಥ್ಯವಿರುವುದರಿಂದಲೇ ಪ್ರಕೃತಿ ಚೇತನಗಳಾದ ವನ, ಗಿರಿ, ಜಲ, ಗಾಳಿ, ಇವೆಲ್ಲವುಗಳಲ್ಲಿಯೂ ತಮ್ಮ ತಮ್ಮ ವೈಯಕ್ತಿಕ ಸಮಸ್ಯೆಗಳಿಗೆ ಪರಿಹಾರವನ್ನು, ಸಮಾಧಾನವನ್ನು ಕಂಡುಕೊಳ್ಳುವ ಜಿಜ್ಞಾಸೆಯನ್ನು ಕೆರಳಿಸುತ್ತಾನೆ.

ಈ 'ಕವಿ'ಗೆ ಜೀವ ಜಗತ್ತುಗಳನ್ನು ಸಾಮಾನ್ಯರಿಗಿಂತ ಅಧಿಕವಾಗಿ ಅರಿಯುವ ಸಾಮರ್ಥ್ಯ, ಅಗೋಚರ ಶಕ್ತಿಯೊಂದುಂಟು. ಪ್ರತಿಯೊಂದು ಚೇತನವೂ ಈ ಶಕ್ತಿಯ ಅಧಿನಿಯಮಕ್ಕೆ ಬದ್ಧವಾಗಿ ನಡೆಯುತ್ತದೆ. ಅದು ಮೇಲು ನೋಟಕ್ಕೆ ಯಾಂತ್ರಿಕ. ಆದರೆ ಈ ಯಾಂತ್ರಿಕತೆಯಲ್ಲಿಯೇ

ಜೀವನದ ಶೃತಿಯಿದೆ. ಇವನ್ನು ಉಲ್ಲಂಘಿಸಿ, ಅತೀತವಾಗಿ, ಮೀರಿ ಬೆಳೆಯಲು ಸಾಧ್ಯವಿಲ್ಲ, ಇಡೀ ಸೃಷ್ಟಿ ಕ್ರಿಯೆ ಮುಂದೆ ನಡೆಯುತ್ತಿರುವುದು, -ಯಾರು ? ಏಕೆ ? ಹೇಗೆ ? - ಎನ್ನುವ ಜಿಜ್ಞಾಸು ಮೂಲವಾದ ಪ್ರಶ್ನೆಗಳ ಮೇಲೆ, ಇವುಗಳಿಗೆ ಸಮಾಧಾನವನ್ನು ಕಂಡು ಕೊಂಡ ಕ್ಷಣವೇ ಬದುಕು ಪರಿಪೂರ್ಣ, ಆದರೆ ಕವಿಯೇ ಭಾವಿಸುವಂತೆ, ಈ ಪ್ರಶ್ನೆಗಳಿಗೆ ಉತ್ತರ "ದೇವರಿಗೂ ಮಿಗಿಲಾದುದು" ಆದ್ದರಿಂದ ಆಗದದ್ದಕ್ಕಾಗಿ ಹಂಬಲಿಸಿ, ಅರಕೆಗಳ ಕೊರಗಿನಿಂದ ಅಸ್ತಿತ್ವದಲ್ಲಿನ ಆನಂದದಿಂದ ವಂಚಿಸಿ ಕೊಳ್ಳುವುದಕ್ಕಿಂತಲೂ ಇರುವ ಸ್ಥಿತಿಯೊಂದಿಗೆ ಸಾಮರಸ್ಯವನ್ನು ಕಂಡುಕೊಂಡು ಅದನ್ನೇ ಅನಿವಾರ್ಯವೆಂದು ಒಪ್ಪಿಕೊಂಡು, ನಮ್ಮನ್ನಾಳುವ ನಮಗಗೋಚರ ಸತ್ವ ಸಂಪನ್ನತೆಗೆ ಸರ್ವ ಸಮರ್ಪಣ ಭಾವದಿಂದ ಒಪ್ಪಿಕೊಂಡಾಗ ಮತ್ತು ನಮ್ಮನ್ನು ದಿಕ್ಕು ತಪ್ಪಿಸುವ 'ಅಹಮಿಕೆ'ಯನ್ನು ಚೆಲ್ಲಿಕೊಟ್ಟಾಗ ಮಾತ್ರವೇ ಚೆಲುವಿನ ಸಾಕ್ಷಾತ್ಕಾರವಾಗುತ್ತದೆ. ಆದರೆ ಈ ಸಂದರ್ಭದಲ್ಲಿ ಒಂದು ಎಚ್ಚರಿಕೆ ಅನಿವಾರ್ಯವಾಗುತ್ತದೆ. ತರ್ಕ ಮೂಲವಾದ ಬೌದ್ಧಿಕ ಜಿಜ್ಞಾಸೆಯನ್ನು ಬಿಟ್ಟು ಹೃದಯ ಸಮರ್ಪಣ ಸ್ಥಿತಿಯಲ್ಲಿ ಮಾತ್ರವೇ ಈ ಸೌಂದರ್ಯ, ಶಿವ, -ಸತ್ಯದ ಸಾಕ್ಷಾತ್ಕಾರ ವಾಗುತ್ತದೆ. ಒಂದು ಕಡೆ ಪು.ತಿ.ನ. ಅವರು ಅಹಂರಾಹಿತ್ಯದ ಬಗ್ಗೆ ಹೇಳಿದ- "ಅಹಂರಾಹಿತ್ಯದಿಂದ ಅಥವಾ ಅನ್ಯ ವಸ್ತುವಿನಲ್ಲಿ ಅಹಂಸತ್ವ ಲೀನತೆಯಿಂದ ವಿವಿಧಾನುಭೂತಿಗಳನ್ನು ಪಡೆದು ಅವುಗಳನ್ನು ವಿಷಯೀ ಕರಿಸಬಹುದು. 'ಅಹಂರಹಿತ' ನೆನ್ನುವಷ್ಟು ಅನ್ಯವಸ್ತುಲೀನತೆ, -ಇದು ಅಷ್ಟು ಸುಲಭವಲ್ಲ. ಮೊದಲು ಅಹಂಸತ್ವಸಮೃದ್ಧಿಯನ್ನು ಪಡೆಯುವುದು ಅದನ್ನು ಸಂಸ್ಕರಿಸಿ ಶುದ್ಧಿಗೊಳಿಸಿ ವಶ್ಯಾತ್ಮನೆನಿಸುವುದು, ಆ ಮೇಲೆ ಇಷ್ಟ ವಸ್ತುವಿನಲ್ಲಿ ಪ್ರಯೋಗಿಸಿ ಅದರಲ್ಲಿ ಲಯಗೊಳಿಸಿ,ಅದರ ಸ್ವಭಾವದಲ್ಲಿನ ಸ್ವಾರಸ್ಯಗಳನ್ನು ಗ್ರಹಿಸುವುದು, ಆಮೇಲೆ ತನ್ನಾನಂದದಲ್ಲಿ ಲೀನಗೊಳಿಸಿ ಅದು ತಂದ ಸ್ವಾರಸ್ಯಗಳನ್ನು ಪೃಥಕ್ಕರಿಸಿ ವಿಷಯ ಸ್ಥಾನದಲ್ಲಿಟ್ಟು ನಿರೀಕ್ಷಿಸುವುದು ಮತ್ತು ಇಚ್ಛೆಬಂದಂತೆ ಬಣ್ಣಿಸುವುದು" -ಎನ್ನುವ ಮಾತುಗಳು 'ಸಮರ್ಪಣ' ಪರಿಕಲ್ಪನೆಗೆ ಹೆಚ್ಚಿನ ವಿಶ್ಲೇಷಣೆಯಾಗಬಹುದೆನಿಸುತ್ತದೆ.

ಇಷ್ಟೆಲ್ಲ ಕಾವ್ಯ ಸಂಬಂಧಿಯಾದ ಚಿಂತನೆಗಳು ಈ ನಾಟಕದಲ್ಲಿ ಎರಡು ನೆಲೆಗಳಲ್ಲಿ ನಡೆಯುವ ಕ್ರಿಯೆಯ ಮೂಲಕ ವ್ಯಂಜಿತವಾಗುತ್ತವೆ.

ಒಂದು ನೆಲದ ಅಥವಾ ಲೌಕಿಕದ ನೆಲೆಯಲ್ಲಾದರೆ ಇನ್ನೊಂದು ಕವಿಯ ಭಾವಸುಪ್ತಿ ಅಥವಾ ಭಾವಯೋಗ ಸ್ಥಿತಿಯಲ್ಲಿ, ಇಡೀ ನಾಟಕದಲ್ಲಿ 'ಕವಿ'ಗೆ ಕವಿ ಮಣಿವ ಎಂಬ ಧೋರಣೆಯೊಂದಿಗೇ ಪು.ತಿ.ನ. ಕಾಣಿ ಕೊಳ್ಳುತ್ತಾರೆ. ನಾಟಕದ ಪ್ರಾರಂಭವೆ ಕವಿ ಪ್ರಾರ್ಥನೆಯೊಂದಿಗೆ,

"ಒಂದು ಮೊಗದೊಳು ಚೆಲುವು
ಮತ್ತೊಂದರೊಳು ನಲವು
ರಸಿಕರೊಲುಮೆಯ ಬಳಕೆಗೆಂಥ ನಾಣ್ಯ!
ಇದನು ಟಂಕಿಸುತಿರುವ ಕವಿಯೆಮಾನ್ಯ
ನಮೋ ನಮೋ ಆತನಿಗೆ
ನಮೋ ರಸ ವಿಧಾತನಿಗೆ"

-ಎಂದು ಚೆಲುವು ನಲಿವುಗಳನ್ನು ತನ್ನ ಕಾವ್ಯ ಕರ್ಮದ ಮೂಲಕ ಏಕ ಕಾಲಕ್ಕೆ ರಸಿಕರಿಗೆ ಸಾಧ್ಯವಾಗಿಸಿಕೊಡುವ ಕವಿಯನ್ 'ಮಾನ್ಯ' ಎಂದೂ 'ರಸವಿಧಾತ' ಎಂದೂ ಕೊಂಡಾಡಿದ್ದಾರೆ.

ಕಾವ್ಯ ಜಿಜ್ಞಾಸೆ, ಚರ್ಚೆ, ಪ್ರಕಾಶನಗಳಿಗೆ ಬಿಡುವಿನ ಬೇಸ ಕಳೆಯಲು ವಿಹಾರಕ್ಕೆ ಹೊರಟ ಹುಡುಗರು ನೆಪವಾಗುತ್ತಾರೆ, ಹೇಗೆ ಕಾ ಕಳೆಯ ಬೇಕೆಂದು ತೋಚದೆ ಪರಸ್ಪರ ಚರ್ಚೆ ವಾದ ವಿವಾದಗಳ ನಡೆದು 'ಕವಿ' ಪ್ರಸ್ತಾಪ ಮುಂದಾದಾಗ ಕೆಲವರ ವ್ಯಂಗ್ಯ ಹಾಸ್ಯ ಕೀಟಲೆಗಳಿಗೆ ದಾರಿಯಾದರೂ ಕಡೆಗೆ ಏಕಾಭಿಪ್ರಾಯವನ್ನು ತಲುಪುತ್ತಾರೆ.

ಕವಿ ಕುಟುಂಬದ ಸ್ಥಿತಿ, ಹೆಂಡತಿ, ಮಕ್ಕಳ ಕಷ್ಟ, ಅವಳ ನಿರಾಸೆ ಸಂಕಟಗಳು ಆ ಯುವ ಮನಸ್ಸುಗಳನ್ನು ಸಂವೇದನಾಶೀಲ ವಾಗಿಸುತ್ತದೆ ಅವಳ ಅಳಲಿನ ಕತೆಯಮೂಲಕ ಕವಿ ಜೀವನ, ಕವಿವ್ಯಕ್ತಿತ್ವ ಕ ಧೋರಣೆಗಳು ಕವಿಯ ಅತಿಶಯತೆ, ಅದ್ಭುತ ಶಕ್ತಿ ಸಾಮರ್ಥ್ಯಗಳು ಎ ಎಳೆಯಾಗಿ ಕಾಣಿಸಿಕೊಳ್ಳುತ್ತವೆ. ಇಲ್ಲಿನ ಕವಿಗೆ ಮಡದಿ, ಮಕ್ಕಳು ಕುಟುಂಬದ ಚಿಂತೆಗಿಂತ ಲೋಕದ ಬಾಳೇ ಮುಖ್ಯ. ಸದಾ ಪ್ರಕೃತಿಯ ಚೆಲುವಿನ ಆರಾಧನೆ, ಕಾವ್ಯಚಿಂತನೆ, ಲೋಕಾನುಭವ, ಸೌಂದರ್ಯಾ ನುಭವಕ್ಕೆ ಆದ್ಯತೆಗಳು ಕಾವ್ಯ ಸೃಷ್ಟಿಯ ದೃಷ್ಟಿಯಿಂದ ಮುಖ್ಯವಾಗಬಹುದೆ

ಹೊರತು, ಅದರಿಂದ ಹೊಟ್ಟೆ ತುಂಬ ಲಾರದು. ಕಷ್ಟಗಳು ಕಳೆಯುವು, ಎಂಬುದು ಕವಿ ಹೆಂಡತಿಯ ಭಾವನೆ ಮತ್ತು ಅದಕ್ಕಾಗಿ ಬೇಸರ. ಇಲ್ಲವಾದಲ್ಲಿ 'ಕವಿ' ಗಂಡನ ಅಸಾಧರಣ ಪ್ರತಿಭೆ ಅಮೂಲ್ಯ ಸೃಷ್ಟಿಕಾರ್ಯದ ಬಗ್ಗೆ ಹೆಮ್ಮೆಯಿದೆ. ಅವಳಿಗೂ ಗೊತ್ತು 'ಕಾವ್ಯಕು ಸಂಸಾರಕು ಹುಟ್ಟುಹಗೆ' ಆದರೂ ಸಂಸಾರದ ಜವಾಬ್ದಾರಿಯೂ ಅವನಿಗೆ ಮುಖ್ಯವಾಗಬೇಕು. 'ಕವಿಯೂ ಕೂಡಾ ಲೋಕದ ವ್ಯಕ್ತಿ ಆತನಿಗೂ ಎಲ್ಲರಂತೆಯೇ ಸಾಂಸಾರಿಕ ಅನುಭವಗಳು. ಈ ಅನುಭವಗಳೇ ಆತನ ಅಂತಃ ಪ್ರಜ್ಞೆಯಲ್ಲಿದ್ದು ಕಾವುಪಡೆದು, ಕಾವ್ಯವಾಗಿ ಉದಯಿಸುತ್ತದೆ. ಲೋಕಾನುಭವದ ಕಚ್ಚಾ ಸಾಮಗ್ರಿಯೇ ಆತನ ಕಾವ್ಯದ ಮೂಲ ದ್ರವ್ಯ' ಆದ್ದರಿಂದಲೇ "ಎಲ್ಲಕಾವ್ಯಕೂ ಸಂಸಾರವೇ ಗುರಿ" ? -ಎಂಬುದು ಅವಳ ತರ್ಕ ಮತ್ತು ಪು.ತಿ.ನ. ಅವರ ಅಭಿಪ್ರಾಯವೂ ಅದೇ.

ತಾನು ಬಾಳಿ ಬದುಕುತ್ತಿರುವ ಜಗತ್ತಿನ ಸುಖದುಃಖಗಳು, ವಿದ್ಯಮಾನಗಳು, ಎಲ್ಲರ ಅನುಭವಗಳೂ ಭಾವ ವೈವಿಧ್ಯಗಳು - ಲಹರಿ ಲಹರಿಯಲ್ಲಿ ಬಿಡಿಸಲು ಕವಿಯಿಂದ ಮಾತ್ರ ಸಾಧ್ಯ ಎನ್ನುವುದು ಪು.ತಿ.ನ. ಅವರ ನಿಲುವು, ತಮ್ಮ ಈ ನಿಲುವನ್ನು ಮುಂದಾಳು (ವಿಹಾರಕ್ಕೆ ಬಂದ ಗುಂಪಿನ) ಪಾತ್ರದ ಮೂಲಕ ವ್ಯಕ್ತ ಪಡಿಸುತ್ತಾರೆ.

ಈ ಮುಂದಾಳು ಯುವಕನಿಗೆ ಕಾವ್ಯ ಮತ್ತು ಜೀವನದ ಅನ್ಯೋನ್ಯ ಸಂಬಂಧದ ಅರಿವಿದೆ. ನೆಲಕ್ಕೆ ಹೊರತಾದ ಕಾವ್ಯದ ಬೆಲೆಎಷ್ಟೆಂದು ಬಲ್ಲ, ನೆಲದ ನಂಟು ಕಾವ್ಯಕ್ಕೆ ಅನಿವಾರ್ಯ. ಅದನ್ನು ತಿರಸ್ಕರಿಸಿ, ಅದರಿಂದ ಸಿಡಿದು ಬೇರೆಯಾಗಿ ಬದುಕಲಾಗದು, ಬೆಳೆಯಲಾಗದು, -ಎಂಬ ವಿಚಾರವನ್ನು ಹೆಂಡತಿ-ಗಂಡ ಸಂಬಂಧವನ್ನು 'ಈಕೆ ನೆಲ-ಆತಗಿಡ' ಎನ್ನುವ ಸರಳ ಹೋಲಿಕೆಯೊಂದಿಗೆ ಸ್ಪಷ್ಟ ಪಡಿಸುತ್ತಾನೆ. ನೆಲದಲ್ಲಿ ಬಿದ್ದ ಬೀಜಗಳು ಮೊಳಕೆಯಾಡೆದು ಬೆಳೆಯುತ್ತಾ, ಬಲಿಯುತ್ತಾ ಹೋದಂತೆ ನೆಲದೊಂದಿಗಿನ ಅಂತರವನ್ನು ಹೆಚ್ಚಿಸುತ್ತಾ ಹೋದಂತೆ ಕಂಡರೂ ನೆಲದ ಸಂಬಂಧದಿಂದ ಬಿಡಿಸಿಕೊಳ್ಳಲಾಗದ ತೆರದಲ್ಲಿ ತೆಕ್ಕೆ ಹಾಕಿಕೊಂಡಿರುತ್ತದೆ. ಗಿಡಕ್ಕೆ ಇಂಬು, ಸ್ಫೂರ್ತಿಗಳನ್ನು ನೀಡುವ ಸತ್ವವೇ ನೆಲವಾದ್ದರಿಂದ ಅದರಿಂದ ಬೇರೆಯಾಗಿ

ಉಳಿಯಲಾರದು. ಹಾಗೆಯೇ ಕವಿ ಮತ್ತು ಕವಿ ಹೆಂಡತಿ ಸಂಬಂಧ, ಅವರಿಬ್ಬರೂ ಪರಸ್ಪರ ಪೂರಕ ತತ್ವಗಳು ಎನ್ನುವ ವಿಚಾರವನ್ನು ಸ್ಪಷ್ಟ ಪಡಿಸುವುದರ ಜೊತೆಗೆ ಕವಿಗೆ-ಲೋಕದ ನಂಟು, ಸಂಸಾರದ ನಂಟು ಎಷ್ಟು ಅನಿವಾರ್ಯವೆಂಬ ಅಂಶವನ್ನೂ ಎತ್ತಿ ಹಿಡಿಯುತ್ತಾರೆ.

ಕವಿಯ ರಸಸ್ಥಿತಿ, ಸೃಜನ ಪೂರ್ವ ಮನಃ ಸ್ಥಿತಿ, ಸೃಜನಕ್ರಿಯೆ ನಡೆಯುವಾಗಿನ ಅನುಭವಗಳು ಇತ್ಯಾದಿಗಳೆಲ್ಲವನ್ನೂ ಪು.ತಿ.ನ. ಈ 'ಕವಿ'ಯ ಮೂಲಕವಾಗಿ ಕಟ್ಟಿ ಕೊಡುತ್ತಾರೆ.

ಪ್ರಕೃತಿಯ ನಡುವೆ ಕುಳಿತ ಕವಿ ಹರ್ಷೋತ್ಸಾಹದ ಸ್ಥಿತಿಯಲ್ಲಿದ್ದಾನೆ. ರಸಋಷಿ ನಿಸರ್ಗೋಪಾಸನೆಯ ಸಿದ್ಧತೆಯಲ್ಲಿ ಇರುವಂತೆ ಆತನ ಮುಖದ ಮೇಲಿನ ಭಾವಲಹರಿಗಳಿಂದ ವ್ಯಕ್ತವಾಗುತ್ತದೆ. ಯಾವುದೋ ಅಭೂತ ಪೂರ್ವ ಅನಿರ್ವಚನೀಯ ಅಲೌಕಿಕ ಅನುಭೂತಿ, ದರ್ಶನದ ನಿರೀಕ್ಷೆಯಲ್ಲಿರುವಂತೆ ತೋರುತ್ತಿದೆ. ಕವಿಯೇ ಉತ್ಸಾಹದಿಂದ ತನ್ನ ಮನಃ ಸ್ಥಿತಿಯನ್ನು ಹೀಗೆ ವಿವರಿಸುತ್ತಾನೆ.

"ಹಗುರವಾಗಿದೆ ಚಿತ್ತ
ತೀಕ್ಷ್ಣವಾಗಿದೆ ಕರಣ, ನಿರ್ಲಿಪ್ತವಾಗಿಹುದು
ಜೀವಾತ್ಮ ಸ್ಥಿರತೆಯಿಂದೆಚ್ಚೆತ್ತು ಅಲೆತಕ್ಕೆ
ಮೈತೆತ್ತು ಕೊನೆಗೆ ಸಂಚಲನ ಸುಪ್ತಿಗೆ ಸಂದ
ತಿಗರಿಯೊಲು ನಾನಿಹೆನು"

(ದೋ. ಬಿ. ಮತ್ತು ಕವಿ - ಪುಟ 35)

-ಎಂದು ಎನಿಸಿದರೆ ಮರುಕ್ಷಣವೆ ತನ್ನ ಸ್ಥಿತಿಯನ್ನು ವಿವರಿಸಿದ ರೀತಿಗೆ ಅತೃಪ್ತನಾಗಿ ಇನ್ನೊಂದು ಉಪಮೆಯ ಮೂಲಕ ಸ್ಪಷ್ಟಪಡಿಸಲು ಆತುರನಾಗುತ್ತಾನೆ.

"ಅಂತಲ್ಲ ಅಂತಲ್ಲ;
ಬಾಳ ವೀಣೆಗೆ ಕರಣಗಳ ತಂತಿಗಳ
ಮನವೊಪ್ಪ ಶೃತಿಮಾಡಿ ನೂರು ಬೆರಳುಗಳಿಂದ
ಮಿಡಿವಂತೆ ತೋರುತಿದೆ ಪರಮಾತ್ಮ"

(ದೋ. ಬಿ. ಮತ್ತು ಕವಿ ಪು 35)

-ಎಂದು ನುಡಿದು ಪರಮಾತ್ಮನು ಮಿಡಿವ ಗೀತಕ್ಕಾಗಿ ಹೃದಯವನ್ನು ಒಪ್ಪಿಸಿಕೊಂಡಿದ್ದಾನೆ. ಕಾವ್ಯದ ಹುಟ್ಟಿಗೆ, ಶಿವದ ಗೀತಕ್ಕೆ ಬೇಕಾದ ಪೂರ್ವಸಿದ್ಧತೆ ಇದು. ಶೃತಿ ಮಾಡಿಟ್ಟ ವೀಣೆ ಮೆಲುಗಾಳಿ ಬೀಸಿದರೂ ಸುಂದರ, ಮಧುರ ಸುಸ್ವನಗಳನ್ನೇ ಮಿಡಿಯುವಂತೆ ಸಿದ್ಧವಾಗಿ ನಿಂತ ಕವಿ ಹೃದಯದಿಂದಲೂ ಯಾವುದೋ ನಲವು ಯಾವುದೋ ಸಂಗೀತ ಒಗೆಯುವ ಸೂಚನೆಯಿದೆ. 'ವಿಶ್ವಕವಿ' ನುಡಿತ ಮಿಡಿತಗಳಿಗೆ 'ಕವಿ' ಹೃದಯವೀಣೆ ಸ್ಪಂದಿಸಿ ಅಮೋಘವಾದ, ಅಲೌಕಿಕವಾದ ಸಂಗೀತ ಹೊಮ್ಮುವುದಾದರೂ ಅದಕ್ಕೆ ಪೂರ್ವದಲ್ಲಿ ತನ್ನನ್ನೇ ತಾನು ಸಮರ್ಪಿಸಿ ಕೊಳ್ಳ ಬೇಕಾದ ಅನಿವಾರ್ಯತೆಯಿದೆ. ಕವಿಯಲ್ಲಿ ಈ ಸಮರ್ಪಣ ಭಾವದ ಸೌಜನ್ಯವಿದೆ. ಆದ್ದರಿಂದಲೇ ಗಿರಿ, ವಿಪಿನ, ನಿರ್ಝರ ಸ್ರೋತ, ಕುಸುಮ, ಮಂಜರಿ ಮೊದಲಾದ ಸತ್ವಗಳ ಜೊತೆಗೆ

ಪರಶಿವನ ಮನವುಲಿವ
ನೂರು ಸುಸ್ವರಗಳೇ, ಹೊಳಲುಗೊಡಿ ಕರಣದೊಳು
ತನ್ನ ಗೀತಕೆ ತಾನೆ ವಿಶ್ವಕವಿ ಮನಸೋತು
ಮೋದಗೊಳ್ಳುವ ತೆರೆದಿ

(ದೋ. ಬಿ. ಮತ್ತು ಕವಿ ಪು-35)

-ಎಂದು ವಿನೀತನಾಗಿ ಸರ್ವಶಕ್ತಿಗಳಿಗೂ ಪ್ರಾರ್ಥನೆ ಸಲ್ಲಿಸುತ್ತಾನೆ. ದಿವ್ಯದರ್ಶನದ ಕ್ಷಣಕ್ಕಾಗಿ ಧ್ಯಾನಯೋಗ ಸ್ಥಿತಿಗೆ ಸಲ್ಲುತ್ತಾನೆ. ಪ್ರಜ್ಞಾವಸ್ಥೆಯಲ್ಲಿ ಅಲೆತಕ್ಕೆ ಒಳಗಾದ ಮನಸ್ಸು ಈಗ 'ಸಂಚಲನ ಸುಪ್ತಿಗೆ' ಇಳಿಯುತ್ತದೆ. ಬಾಹ್ಯಾನುಭವಗಳಿಗೆ ತೆರೆದು ಕೊಳ್ಳುವ ಇಂದ್ರಿಯಗಳು ಮುದುಡಿ ಅಂತಃ ಕರಣೇಂದ್ರಿಯ ಮಾತ್ರವೇ ಜಾಗ್ರತಾವಸ್ಥೆಗೆ ಸಲ್ಲುತ್ತದೆ. ಯಕ್ಷ, ವನಶ್ರೀ, ಜಲಶ್ರೀ, ಗಾಳಿ, ಮಾನವ ತೇಜಸ್ಸು ಇತ್ಯಾದಿ ಪ್ರಕೃತಿ ಶಕ್ತಿಗಳು ಕವಿಯ ಅಂತರ್ದರ್ಶನದಲ್ಲಿ ಹಾದುಹೋಗುತ್ತದೆ. ಯಕ್ಷನ ಅವತರಣವಾಗಿ, ಕವಿಯನ್ನು ಭಾವಪರವಶತೆಯಿಂದ ಹೊಗಳುತ್ತಾನೆ. ಕವಿ ಚೇತನ ಸರ್ವವ್ಯಾಪಿ, ಸರ್ವಾಂತರ್ಯಾಮಿಯಂತೆ ಸಕಲ ದಿಙ್ಮಂಡಲ ವ್ಯಾಪಕತ್ವದಿಂದ ಸಮಸ್ತಾನುಭೂತಿಗಳನ್ನು ಸಂಗ್ರಹಿಸಿ, ಜಗವ ಪದರ ಪದರಗಳಲ್ಲಿ ಮೌನದಿಂದ ಮಿಡಿಯುವ ಸೋಜಿಗದ ಗೀತವನ್ನು ಸೆರೆಹಿಡಿದು ಉಜ್ವಲಗೊಳಿಸಿ ಶ್ರೋತೃ ಪಥವನ್ನೈದಿಸುವ ವಿಶ್ವ ಶಿಲ್ಪಿಯು

ಕಡೆದ ಚಿದ್ಯಂತ್ರವೆಂದು ವಿವರಿಸುತ್ತಾನೆ. ಚಿದ್ಯಂತ್ರ್ಯವೆಂಬ ಕಲ್ಪನೆ ಪು.ತಿ.ನ.ರ ಹೊಸ ಪರಿಭಾಷೆಯಾಗಿದೆ.ಆದರೆ ಇದರ ಬಗ್ಗೆ ವಿಮರ್ಶಕರ ಆಕ್ಷೇಪವಿದೆ. ಈ ಆಕ್ಷೇಪಕ್ಕೆ ಆಗತಾನೇ ಪ್ರವೇಶವಾಗಿದ್ದ 'ಬಾನುಲಿ' ಎಂದು ಅರ್ಥೈಸಿದ್ದರಿಂದ, ಯಕ್ಷನ ಬಾಯಿಂದ ಅಂತಹ ಪದ ಅಷ್ಟು ಉಚಿತವೆನಿಸುವುದಿಲ್ಲ ಎನ್ನುವುದು ಕಾರಣವಾಗಿದೆ. ಆದರೆ ಈ ಆಕ್ಷೇಪ ಆಧಾರ ರಹಿತವಾದ್ದು ಮತ್ತು ತಪ್ಪು ಗ್ರಹಿಕೆಯಿಂದ ಉಂಟಾದದ್ದು.

ಪ್ರಕೃತಿ ಶಿಲ್ಪಿ ಕಡೆದ ಚಿದ್ಯಂತ್ರವಾದ ಕವಿಗೆ,
"ಬಾಳು ಬಾಳುಗಳಾಚೆ ಬ್ರಹಾಂಡ ಹೃದಯಾಂತ
ರಾಳದೊಳು ಸಂತತಂ ಸಂಜನಿಸಿ, ಆನಂದ
ಮಾತೃಕೆಯ ತಾನಾಗಿ, ವಿಶ್ವಕೆಲ್ಲಕು ಹರಡಿ
ವಿಕೃತ ಪದರಗಳಲ್ಲಿ ಮೌನವಾಗಿಹ ಶಿವದ
ಗೀತವನು ಕರಣಗೋಚರಮಾಗೆ ಸ್ಪಂದಿಸುತ
ಚೇತನರೊಳಾ ಚಿದಾನಂದವನೆ ಮರುಕೊಳಿಪ"

-ದೋ. ಬಿ. ಮತ್ತು ಕವಿ ಪು - 37

- ಸಾಮರ್ಥ್ಯವಿದೆ. ಅದರ ಜೊತೆಗೆ ಲೋಕದಲ್ಲಿ ಜೀವಿಗಳ ಕ್ರಮವನ್ನು ನಿಯಂತ್ರಿಸಿ, ಮನಸ್ಸುಗಳನ್ನು ಪರಿಷ್ಕರಿಸಿ, ಸ್ವಾನುಭಾವಕ್ಕೆ ಲೋಕ ತನ್ನನ್ನು ತೆರೆದು ಕೊಂಡು ಶಿವದತ್ತ ಮಾತ್ರವೇ ನಡೆವಂತೆ ಮಾಡೆಂದು ಕವಿ ಚೇತನಕ್ಕೆ ಯಕ್ಷನು ಮಾಡುವ ಪ್ರಾರ್ಥನೆ, ಪು.ತಿ.ನ. ರ ಪ್ರಾರ್ಥನೆಯೂ ಹೌದು.

ಇಡೀ ಜೀವ ಜಗತ್ತು ಯಾವುದೋ ಒಂದು ಅಗೋಚರ ಶಕ್ತಿಯ ಪ್ರೇರಣೆ ಮತ್ತು ನಿರ್ದೇಶದಂತೆ ನಡೆಯುತ್ತಿದೆ. ಜಲ, ವನ, ಮರ, ಮಾನವ ತೇಜಸ್ಸು ಸಂವೇದನಾಶೀಲವಾಗಿ, ಮಾತು, ಮೈ ಪಡೆದು, ತಾವೆಲ್ಲರೂ ಅಗಮ್ಯ ಅಗೋಚರ ನಿಯತಿಯ ನಿಯಮಕ್ಕೆ ಬದ್ಧವಾಗಿ ನಡೆಯಬೇಕಾದ ಅನಿವಾರ್ಯತೆಯ ಮರ್ಮವರಿವ ಜಿಜ್ಞಾಸೆಯಿಂದ, ಆಸೆ, ಭರವಸೆಗಳಿಂದ ಕವಿಯಲ್ಲಿಗೆ ಬರುತ್ತವೆ. ಪ್ರತಿಯೊಂದು ತಾನು ಬದ್ಧ ಯಾಂತ್ರಿಕ ಕ್ರಿಯೆಗೆ ಬೇಸರ, ನೋವು. ಋತು ಮಾನಗಳಿಗನುಗುಣವಾಗಿ ನೋವು ವಿರಹ ಸಂಭ್ರಮಗಳನು ಭವಿಸುವ ವನಶ್ರೀ, ನಿಲ್ಲಬಯಸಿದರೂ

ನಿಲ್ಲಲಾಗದ ಅಸಹಾಯ ಕತೆಯಿಂದ ಬಳಲುವ ಜಲಶ್ರೀ, ಮುದವೇ ಇಲ್ಲದೆ, 'ತೊತ್ತೇ ದುಡಿ' ಎನ್ನುವ ಅಂತರ್ವಾಣಿಯ ಒತ್ತಡಕ್ಕೆ ಒಳಗಾಗಿ ವಾಸ್ಯದ ಸಂಕಟವನ್ನು ಅನುಭವಿಸುವ ಗಾಳಿ-ಎಲ್ಲವೂ ಕವಿಯಿಂದ ಸಮಾಧಾನ ಪಡೆಯ ಬಯಸುತ್ತವೆ. ಅವುಗಳಲ್ಲಿ ವಿನಯವಿದೆ. ಕವಿಯ ಬಗೆಗೆ ಗೌರವವಿದೆ. ಆದರೆ ಪ್ರಶ್ನೆಗಳಿಗೆ ಉತ್ತರ ಕಂಡು ಕೊಳ್ಳುವ ಮೊದಲೇ ಮಾನವ ತೇಜಸ್ಸು ಎದುರು ನಿಲ್ಲುತ್ತದೆ. ಆ ನಿಲುವಿನಲ್ಲಿ, ಮಾತಿನ ಧಾಟಿಯಲ್ಲಿ ಆಹಂಕಾರವಿದೆ. ಕವಿಗೆ ಪರಿಚಯ ನೀಡುವಾಗಲಂತೂ, ಮೇರೆ ಮೀರಿದ ಅಹಂಕಾರ ದರ್ಶನವಾಗುತ್ತದೆ.

ಸೃಷ್ಟಿಯಲ್ಲಿ ಪ್ರತಿಯೊಂದು ಶಕ್ತಿ ಚೇತನಕ್ಕೂ ಮೀರಿದ ಶಕ್ತಿಯೊಂದುಂಟಾದರೂ ತಾನು ಮಾತ್ರ ಈ ಮೀರಿದ ಶಕ್ತಿಗೂ ಮೀರಿದಂತಿರುವ ದೇವರುಗಳ ಸೃಷ್ಟಿಗೂ ಸಾವಿಗೂ ಕಾರಣನಾದೆನೆಂದು ತಿಳಿಸುತ್ತದೆ. "ನಾನಾರ್ ದೇವರ ನೆಲ ಮತ್ತವರಾಡುಂಬೊಲ ಸಗ್ಗದ ಬಸಿರು" ಎಂದು ತನ್ನ ಮಹತ್ವವನ್ನು ಅಹಂಭಾವದಿಂದ ಸಾರಿಕೊಳ್ಳುತ್ತದೆ. ದೇವರು, ಸ್ವರ್ಗ ನರಕಗಳೆಲ್ಲವೂ ತನ್ನ ಕೌತುಕದ ಪರಿಣಾಮಗಳು. ಇಡೀ ಸೃಷ್ಟಿಯನ್ನೇ ತನ್ನ ಮುಷ್ಟಿಯಲ್ಲಿ ಇಟ್ಟು ಕೊಳ್ಳುವ ಮಹತ್ವಾಕಾಂಕ್ಷೆ ಯೊಂದೆಡೆಯಾದರೆ ತನ್ನೆಲ್ಲ ಆಕಾಂಕ್ಷೆ ಸಾಧನೆಗಳಿಗೂ ಮೀರಿದ್ದು ಏನೋ ಇದೆ ಎನ್ನುವ ಸಂಶಯಕಾಡುತ್ತದೆ. ಆದರೆ ಅದನ್ನು ತಿಳಿಯಲು ಬೇಕಾದ ಅರಿವು ಸಾಲದಾಗಿದೆ. ಮುಂದೇನು ? ಎನ್ನುವ ಯೋಚನೆ ಒಂದಡಿಯಿಂಟ್ಟತಾಗುತ್ತದೆ. ಬಹುಶಃ ಕವಿಗೆ ಇದರ ಮರ್ಮ, ತನ್ನ ಅಶಾಂತಿಗೆ ಕಾರಣ ತಿಳಿದಿರಬಹುದೆಂದು ಬಯಸಿ ಬಂದರೆ ಕವಿಯೂ ಅಸಮರ್ಥನಾಗಿದ್ದಾನೆ. ಅಲ್ಲದೆ ಮಾನವ ತೇಜಸ್ಸಿನ ಅಹಂಕಾರದಿಂದ ತನಗೂ ಮಿಗಿಲಾದುದನ್ನು ತಿಳಿಯುವುದಾದರೂ ಹೇಗೆಂಬ ಕವಿಯ ಪ್ರಶ್ನೆ ಮಾನವ ತೇಜಸ್ಸಿನ ಅನುಮಾನಗಳನ್ನು ಹಾಗೆಯೇ ಉಳಿಸುತ್ತದೆ.

ಮಾನವ ತೇಜಸ್ಸು ಬದುಕಿನ ಕೊನೆಯ ಅನ್ವೇಷಣೆಗೆ ಜಜ್ಞಾಸು ಭಾವದಿಂದ ಹೊರಡುತ್ತದೆ. ಸ್ವಸುಖ ಸಂತೋಷಗಳಿಗಾಗಿ ದೇವರ, ಸ್ವರ್ಗದ ಸೃಷ್ಟಿಯನ್ನು ಮಾಡಿಕೊಳ್ಳುತ್ತದೆ. ಆದರೆ ಎಲ್ಲಿಯೂ ಅದರ ಮನಸ್ಸಿಗೆ ಸಮೃದ್ಧಿ, ಸಮಾಧಾನ, ತೃಪ್ತಿ, ಸಂತೋಷಗಳು

ದೊರೆಯುವುದಿಲ್ಲ, ಬೌದ್ಧಿಕ ಜಿಜ್ಞಾಸೆಯಿಂದ ಸೃಷ್ಟಿಯ ರಹಸ್ಯ, ಬದುಕಿನ ನೆಲೆಗಳನ್ನು ಕಂಡುಕೊಳ್ಳಲು ಹೊರಟಷ್ಟೂ ಬೇಸರವೇ ಬುತ್ತಿಯಾಗಿ ಉಳಿಯುತ್ತದೆ. ಮುಂದೇನಿಹುದೆಂದು ಮುಂದೆ ಹೋದಷ್ಟೂ ಹೆಜ್ಜೆ ಹಿಂದೆ ಬಿದ್ದಿರುತ್ತದೆ. ಕೇವಲ ಮುನ್ನಡೆಯುತ್ತಿರುವ ಭ್ರಮೆಯೇ ಅದರ ಪಾಲಿಗೆ ಉಳಿದಿರುತ್ತದೆ. ಊರ್ಧ್ವಗಾಮಿಯಾಗಿ ಬೆಳೆಯ ಬೇಕೆಂದು ಹೊರಡುವ ಮನುಷ್ಯನ ಬುದ್ಧಿಗೆ ತನ್ನ ಅಧೋಮುಖತೆಯೇ ಎದುರಾದಾಗ ಅವನ ಮನಸ್ಸು ಬೇಸರ, ಅತೃಪ್ತಿ, ಅಸಮಾಧಾನಗಳ ಕುಲುಮೆಯಾಗುತ್ತದೆ. ಎಲ್ಲಕ್ಕೂ ಮಿತಿಯಿದ್ದು ತಾನು ಮಾತ್ರ ಈ ಮಿತಿಯನ್ನು ಮೀರಿದ ಶಕ್ತಿಯಾಗಿ ದೇವರುಗಳನ್ನೇ ತನ್ನುಸಿರಿನಿಂದ ಜೀವಂತವಾಗಿ ಇರಿಸಿರುವೆನೆಂಬ ಹೆಮ್ಮೆಯ ಭಾವವಿದ್ದರೂ, ಬುದ್ಧಿಗೂ ಎಟುಕದ,ತನ್ನ ಅಲ್ಪತೆಯ, ಅಪರಿಪೂರ್ಣತೆಯ ನೋವು ಮುಂದೇನು-ಎನ್ನುವ ಪ್ರಶ್ನೆಗೆ ಉತ್ತರವಾಗಿ ಏನೋ ಇದೆ ಎಂಬ ಸಂದೇಹ ಮಾನವ ತೇಜಸ್ಸನ್ನು ಜರ್ಝರಿತವಾಗಿಸಿದೆ. ಅದಕ್ಕೆ ಅದರ ನೆಲೆ, ಅಶಾಂತಿಗೆ ಪರಿಹಾರಗಳನ್ನು ಕಂಡುಕೊಳ್ಳ ಬೇಕಾಗಿದೆ. ಆದರೆ ಅದರಪ್ರಯತ್ನಕ್ಕೆ ನಿರಾಶೆಯೇ ಉತ್ತರವಾಗುತ್ತದೆ. ಯಾಕೆಂದರೆ ಮಾನವನ ಜಿಜ್ಞಾಸೆಯ ಪ್ರಶ್ನೆಗೆ ಕವಿಯೂ ಸೇರಿದಂತೆ ಯಾರಿಂದಲೂ ಉತ್ತರ ಸಿಗಲಾರದು ಅಲ್ಲದೆ ಅದರ ಪ್ರಶ್ನೆಯಿಂದ ಕವಿಯ ಮನಸ್ಸು ಮತ್ತಷ್ಟು ಅಜ್ಞಾನದತ್ತ ಹೊರಳುತ್ತದೆ.

"ನೀನಿನ್ನ ತೇಜದಿಂದೆನ್ನರಿವ ಕೋರೈಸು  
ತಜ್ಞಾನದಿರಳನ್ನೇ ತರುತಲಿರುವೆ  
ನಿನ್ನ ಸಂದೆಗವಿದನು ಯಾವ ದೇವತೆಗೊರೆವೆ  
ದೇವರಿಗೂ ಮಿಗಿಲಾದುದೆಂದು ತಿಳಿವೆ ?"

(ದೋ.ಬಿ.ಮತ್ತು ಕವಿ ಪು - 53)

ಎಂದು ಕೇಳುವ ಈ ಪ್ರಶ್ನೆಯ ಉತ್ತರ ರೂಪಕದ ಎಲ್ಲೆಗಳನ್ನು ವಿಸ್ತರಿಸುತ್ತದೆ ಮತ್ತು ನಾಟಕಕ್ಕೆ ಅರ್ಥ ಪೂರ್ಣ ಮುಗಿವನ್ನು ತಂದುಕೊಡುತ್ತದೆ.

ಒಂದು ವಿಚಿತ್ರ ಸಂಗತಿಯೆಂದರೆ, ಸೃಷ್ಟಿಯಲ್ಲಿ ಚೇತನಾ ಚೇತನಗಳೆಲ್ಲವೂ ನಿಯಮ ಬದ್ಧ ಕ್ರಿಯಾಧರ್ಮ, ಸ್ವಭಾವಧರ್ಮ

ಕ್ಕನುಗುಣವಾಗಿ ಕಾಲ ಪ್ರವಾಹದೊಂದಿಗೆ ಸಾಗುತ್ತಿ ರುವುವಾದರೂ, ವಿಶ್ರಾಂತಿ, ಬಿಡುಗಡೆಗಳಿಲ್ಲವೆ ಹೋದರೂ ಮುಂದಿನ ತಮ್ಮ ಭವಿಷ್ಯವಾಗಲೀ, ಮುಂದೇನಿಹುದೆಂಬ ಅರಿವಾಗಲಿ ಸಾಧ್ಯವೇ ಇಲ್ಲವೆಂದು ನಂಬುವ ಕವಿಗೆ ಚೆಲುವಿನ ತತ್ವ ಒಂದು ಪರಿಹಾರವಾಗಿ ಕಾಣಿಸುತ್ತದೆ. ಎಲ್ಲ ಪ್ರಶ್ನೆಗಳಿಗೂ ಅದೇ ಉತ್ತರವಾಗುತ್ತದೆ. ಯಕ್ಷನೂ ಕವಿ ಕಣ್ಣಿಗೆ ಹೋಳೆವ ಉತ್ತರವನ್ನೇ ಸಮರ್ಥಿಸುತ್ತಾನೆ. 'ನಿಮ್ಮ ಪ್ರಶ್ನೆಗಿವಳುತ್ತರ' ಎಂದು, ಸಂಕೀರ್ಣವಾಗಿರಬಹುದಾಗಿದ್ದ ನಾಟಕವನ್ನು ಸರಳೀಕರಿಸಿ ಬಿಡುತ್ತಾನೆ. ಚೆಲುವು, ಸೌಂದರ್ಯಗಳ ಮಹಾರಾಧಕರಾದ ಪು.ತಿ.ನ. ಅವರಿಗೆ ಸುಲಭ ಪರಿಹಾರವಾಗಿ ಚೆಲುವಿನ ಸಾಕ್ಷಾತ್ಕಾರವನ್ನು ಮಾಡಿಸಿ ಬಿಡುತ್ತಾನೆ. ಚೆಲುವಿನ ಬಗ್ಗೆ ಅವರ ಮೀಮಾಂಸೆಯನ್ನು ಗಮನಿಸಬೇಕು. ಅವರ ಅಭಿಪ್ರಾಯದಲ್ಲಿ ಅಹಂಕಾರವನ್ನು ಚೆಲ್ಲಿಕೊಟ್ಟು ಸಮರ್ಪಣ ಭಾವಸ್ಥಿತಿಯಲ್ಲಿ ಮಾತ್ರವೇ ಚೆಲುವಿನ ದರ್ಶನ ಸಾಧ್ಯವಾಗುತ್ತದೆ. ಜಿಜ್ಞಾಸುಮೂಲವಾದ ಬುದ್ಧಿಗೆ, ವಿಚಾರ, ವಿಶ್ಲೇಷಣೆಗೆ ಒಲಿಯದೆ ಕೇವಲ ಹೃದಯ ಭಾವಕ್ಕೆ ಮಾತ್ರವೇ ಗೋಚರಿಸುತ್ತಾಳೆ. ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ತೋರಿ ತೋರದಂತೆಯೂ, ಚಂಚಲಳಾಗಿ, ಅಸ್ಥಿರಳಾಗಿ ಇದ್ದರೂ, ಏಹೇಕೆಗೆಸಿಗುವುದು ಸುಲಭ ಸಾಧ್ಯವಲ್ಲ. 'ಧೀರರಾದವರ ದೃಷ್ಟಿಗೆ'ಸುಸ್ಥಿರಳಾಗಿ ಕಾಣುತ್ತಾಳೆ. ಬಯಸಿ ಹೃದಯ ತೆರೆದರೆ ಹತ್ತಿರದಲ್ಲಿಯೇ ಚೆಲುವು ದರ್ಶನವೀಯುತ್ತದೆ. ಆದರೆ ಬುದ್ಧಿಯ ವಶಕ್ಕೆ ಮಾತ್ರ ದೊರೆಯದೆ ದೂರ ದೂರವೆ ಉಳಿಯುತ್ತಾಳೆ. ಕಂಡು ಕಾಣದಂತೆ ಮಿಂಚಿನಂತೆ ಮರೆಯಾಗುವ ಚೆಲುವಿಗೆ ಹಂಬಲಿಸಿ ಹಾತೊರೆಯುವ ಜೀವ ಜಗತ್ತು 'ಆಸೆಯಗವಿ ಹೊಕ್ಕು' ಅದಕ್ಕಾಗಿಯೇ ಹುಡುಕುತ್ತಿದೆ. ಇಂತಹ ಚೆಲುವಿನ ಬೆಳಕನ್ನು ಒಳಕೊಳ್ಳುವುದರಲ್ಲಿ ಸಕಲಸೃಷ್ಟಿಯ ಕ್ಷೇಮ ಸಮಾಧಾನಗಳಿವೆ - ಎಂಬ ಈ ಮಾತುಗಳೆಲ್ಲವೂ ಕವಿಯ ನಿಲುವು ಭಾವ ಪಕ್ಷ, ಹೃದಯ ಪಕ್ಷವಾಗಿರುವುದನ್ನು ಸಮರ್ಥಿಸುತ್ತದೆ. ಚೆಲುವು ಕೇವಲ ಬರಿ ಚೆಲುವಲ್ಲ; ಅದು ಸತ್ಯ, ಅದು ಶಿವ ಹಾಗಾಗಿ ಈ 'ತ್ರಿತತ್ವ' ಸಮನ್ವಿತವ ಕಲ್ಪನೆ ಪು.ತಿ.ನ. ಅವರ ದೃಢವಾದ ತಾತ್ವಿಕ ನಂಬಿಕೆಯಾಗಿದೆ. ಗೀತನಾಟಕಗಳಲ್ಲಿ ಮಾತ್ರವೇ ಅಲ್ಲದೆ ಅವರ ಬಿಡಿ ಕವನಗಳೂ ಸಾಕಷ್ಟು ಸಂಖ್ಯೆಯಲ್ಲಿ ಪ್ರಕೃತಿಯನ್ನು ಕೇಂದ್ರವಾಗಿಸಿಕೊಂಡಿವೆ. ಪ್ರಕೃತಿಯ ಚೆಲುವನ್ನು

ಪ್ರಕೃತಿಯ ಅಸ್ತಿತ್ವವನ್ನು ಹಲವು ರೀತಿಗಳಲ್ಲಿ ಪರಿಭಾವಿಸಿ, ಭಾವ ಪ್ರತೀಕಗಳಾಗಿಯೋ, ತತ್ವವಿಚಾರಗಳ ಸಂಕೇತಗಳಾಗಿಯೋ, ಮಾನವಾ ರೋಪಣೆಯೊಂದಿಗೋ ಪರಿಭಾವಿಸುತ್ತಾರೆ. ನವೋದಯ ಕವಿಗಳಂತೆ ಪ್ರಕೃತಿಯಲ್ಲಿ ದೈವತ್ವವನ್ನು, ಸತ್ಯ ಸುಂದರ ಇತ್ಯಾದಿ ಮೌಲ್ಯಗಳನ್ನು ಗುರುತಿಸುತ್ತಾರೆ.

ಒಂದು ನೆಲೆಯಲ್ಲಿ ಪ್ರಕೃತಿ ಚೆಲುವು ಸೌಂದರ್ಯಗಳ ಪ್ರತೀಕವಾದರೆ ಮತ್ತೊಂದು ನೆಲೆಯಲ್ಲಿ ಸೃಷ್ಟಿಯ, ಮಾನವ ಬದುಕಿನ ಅನೇಕ ನಿಗೂಢ ಸಮಸ್ಯೆಗಳಿಗೆ, ಪರಿಹಾರ, ಅರ್ಥಗಳನ್ನು ಹೊಳೆಸುತ್ತದೆ. ಹಣತೆ, ಮಾಂದಳಿರು, ಶಾರದಯಾಮಿನಿ, ಮಲೆ ದೇಗುಲ, ಯದುಗಿರಿಯ ಮೌನ ವಿಕಾಸ, ಇರುಳ ಮೆರಗು ಮುಂತಾದ ಹಲವು ಕವನ ಸಂಕಲನಗಳಲ್ಲಿನ ಪ್ರಕೃತಿ ಕೇಂದ್ರಿತ ಕವಿತೆಗಳೇ ಮೇಲಿನ ಮಾತುಗಳಿಗೆ ಸಮರ್ಥನೆಯನ್ನೂ ನೀಡುತ್ತವೆ. 'ಒಲುಮೆ ಹೊನಲ ತಡೆಗಳು' ಚಿಕಹೂ ಮುಂತಾದ ಸಣ್ಣ ಸಣ್ಣ ಕವಿತೆಗಳೂ ಮೇಲು ನೋಟಕ್ಕೆ ಸರಳವಾಗಿ ಕಂಡರೂ ಒಂದು ಉದಾತ್ತ ತಾತ್ವಿಕ ಚಿಂತನೆಯನ್ನು ಒಳಗೊಂಡಿರುತ್ತವೆ. ಕವಿ, ದೋಣಿಯ ಬಿನದ, ನಾಟಕಗಳು, ಹಿಂದಿನ ಪ್ರಕೃತಿ ಕೇಂದ್ರಿತ ನಾಟಕಗಳಿಗಿಂತಲೂ ಹೆಚ್ಚಿನ ಆಯಾಮವನ್ನು ಒಳಗೊಂಡಿವೆ. ಕಾವ್ಯ ತತ್ವ ಸೌಂದರ್ಯ ತತ್ವಗಳ ವಿಸ್ತೃತ ವ್ಯಾಖ್ಯಾನಕ್ಕೆ ಮತ್ತು ಪ್ರಕೃತಿ-ಮನುಷ್ಯ ಸಂಬಂಧಗಳ ಅನನ್ಯತೆಗೆ ಈ ಕೃತಿಗಳು ಉಜ್ವಲ ನಿದರ್ಶನವಾಗಿವೆ.

ಇತ್ತೀಚಿನ ಗೀತನಾಟಕಗಳಲ್ಲಿ ಒಂದಾದ 'ಶಿಶಿರಾಮೋದ' ಹಿಂದಿನ ಗೀತರೂಪಕಗಳಾದ 'ಶರದ್ವಿಲಾಸ' ವಸಂತಚಂದನ, ವರ್ಷ -ಹರ್ಷ'ಗಳ ಜಾಡಿನಲ್ಲೇ ಇದೆ. ಆದರೆ ಯಾವ ಕವಿಯೂ ಸ್ಪರ್ಶಿಸದ 'ಶಿಶಿರ ಋತು'ವೂ ಕೂಡಾ ಸೌಂದರ್ಯ ದರ್ಶನಾಕಾಂಕ್ಷಿಯಾದ ಮನಸ್ಸಿಗೆ ಚೆಲುವನ್ನು ಸಾಕ್ಷಾತ್ಕಾರಿಸಿ ಕೊಡುತ್ತದೆ ಎನ್ನುವ ನಂಬಿಕೆಯ ಹಿನ್ನೆಲೆಯಲ್ಲಿ 'ಶಿಶಿರದ' ಚೆಲುವಿನ ವರ್ಣನೆಗೆ ಹೊರಡುತ್ತಾರೆ. ಆದ್ದರಿಂದಲೇ ಪು.ತಿ.ನ. ನೀಡುವ ಶಿಶಿರದ ಚಿತ್ರಗಳು ಆಪ್ತವಾಗಿ ವರ್ಣಿತವಾಗಿವೆ, ಅವರು ಭಾವಿಸುವಂತೆ ಚಳಿಗಾಲಕ್ಕೂ ತನ್ನದೇ ಆದ ಸೌಂದರ್ಯವಿದೆ. ಪ್ರಿಯ-ಪ್ರೇಯಸಿಯರಿಗಂತೂ ಚಳಿಗಾಲ ಮಧುರ ನೆನಪುಗಳನ್ನು ತಂದುಕೊಡುವುದರ ಜೊತೆಗೆ ಪರಸ್ಪರ ಬಾಹು ಬಂಧನಕ್ಕೆ, ಬೆಚ್ಚನೆಯ

ಅನುಭೂತಿಗಳಿಗೆ ಹಾರೈಸುವಂತೆ ಮಾಡುತ್ತದೆ. ರೂಢಿಯ ನಂಬಿಕೆಯಲ್ಲಿ ಚಳಿಗಾಲ ಅಪೇಕ್ಷಣೀಯವಲ್ಲ. ಆದರೆ ಈ ಕವಿಗೆ 'ಚಳಿಗಾಲವೆ ಸೊಗಸು' ಬೇಸಿಗೆ ಮಳೆಗಾಲಗಳಿಗಿಂತಲೂ ಮಿಗಿಲು! ಅದಕ್ಕೇ

ಮಳೆಯೊಳಗಣ ಸೊಗ ಮಂಜಿನೊಳಿರದೇ
ಚಳಿಗಾಲದ ಸಿರಿ ಬೇಸಗೆಗಹುದೇ
ಸ್ವರ ಸಾಮೋದದಿ ರಸೆಯಿರುವೀ ಋತು
ವಿರಸವೆನಿಸುವುದೆ ರಸಿಕರಿಗೆ?

(ಸಮಗ್ರಗೇಯ ಕಾವ್ಯ ನಾಟಕಗಳು ಪು - 445)

- ಎಂದು ಪ್ರಶ್ನಿಸುತ್ತಾರೆ.

**'ರಾಜಕೀಯ ವಸ್ತು ಕೇಂದ್ರಿತ ಗೀತನಾಟಕ'**

ಸುಮಾರು ಅರವತ್ತು ವರ್ಷಗಳಿಗೂ ಹಿಂದಿನಿಂದಲೇ ಗೀತನಾಟಕಗಳ ರಚನೆಗೆ ಹೊರಟ ಪು.ತಿ.ನ. ಅವರ ಮುಂದೆ ಇದ್ದದ್ದು 'ನವೋದಯ' ಕಾಲಘಟ್ಟದಲ್ಲಿನ ಭಾವ ಗೀತೆಗಳು. ಈ ಭಾವ ಗೀತೆಗಳ ಪ್ರಮುಖವಸ್ತು ಸಾಮಗ್ರಿ ಪ್ರಕೃತಿ, ಪ್ರೀತಿ, ಪ್ರೇಮ, ಆದರ್ಶಗಳು, ಮಾನವ ಸಂವೇದನೆಗಳು, ರಾಷ್ಟ್ರೀಯತೆ, ಕನಸುಗಳು ಇತ್ಯಾದಿ -ಇವುಗಳ ಅಭಿವ್ಯಕ್ತಿಯಲ್ಲಿ, ಪ್ರಾಸ, ಲಯಗಳು ಪ್ರಮುಖ ನಿರೀಕ್ಷೆಗಳು, ಆದರೆ ಇವುಗಳ ಜೊತೆ ಜೊತೆಯಲ್ಲಿಯೇ ಸಾಮಾಜಿಕ, ರಾಜಕೀಯ ಚಿಂತನೆಗಳೂ ಭಾವಗೀತೆಗಳ ಅಂತರ್ಗತ ಭಾಗವಾಗಿ ಬಂದರೂ ಪ್ರಮಾಣದಲ್ಲಿ ಬಹಳ ಕಡಿಮೆ.

ಪು.ತಿ.ನ.ರಂಥವರು ನವೋದಯದ ನಿರೀಕ್ಷೆಗಳ ರೀತಿಯಲ್ಲಿಯೇ ಬಿಡಿ ಭಾವ ಗೀತೆಗಳನ್ನು ಮತ್ತು ಗೀತನಾಟಕಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿರುವುದಾದರೂ ಅವರಿಗೆ ಸಾಮಾಜಿಕ, ರಾಜಕೀಯ ಚಿಂತನೆಗಳು ಅಪ್ರಸ್ತುತವೆನಿಸಲಿಲ್ಲ, ಆದರೆ ಅಂತಹ ವಿಚಾರಗಳ ಅಭಿವ್ಯಕ್ತಿಗೆ ಬೇರೆ ಬೇರೆ ಸಾಹಿತ್ಯ ಪ್ರಕಾರಗಳನ್ನು ಆಯ್ದುಕೊಂಡರು. ಗೀತನಾಟಕ ಮಾಧ್ಯಮದ ಬಗ್ಗೆ ತಮ್ಮದೇ ಆದ ಕೆಲವು ತಾತ್ವಿಕ ನಿಲುವುಗಳನ್ನು ತಳೆದಿದ್ದರಿಂದ, ಆ ಪ್ರಕಾರಕ್ಕೆ, ತಮ್ಮಾಶಯ, ನಂಬಿಕೆಗಳಿಗೆ ಪೂರಕವಾಗುವ ವಸ್ತುಗಳನ್ನೇ ಆರಿಸಿಕೊಂಡರು. ಬಳಸಿಕೊಂಡ ವಸ್ತು, ಪ್ರತಿಮೆಗಳು

ಪೌರಾಣಿಕ ಧಾರ್ಮಿಕ, ಕಾಲ್ಪನಿಕ ಆಕರಗಳಿಂದಲೇ ಆದರೂ ಸೂಕ್ಷ್ಮ ಅವಗಾಹನೆಯಿಂದ ಸಮಕಾಲೀನ ವಿಚಾರ ಚಿಂತನೆಗಳು ಸಾಂಪ್ರದಾಯಿಕ ಭಾಷೆ, ಶೈಲಿಯ ಪರಿಸರದಲ್ಲಿ ಮೈ ತಳೆದಿರವುದು ಸ್ಪಷ್ಟಗೋಚರ. ಆದರೆ ಹಾಡು, ಕುಣಿತ, ರಂಜನೆಯ ಅಂಗಳಿಗೆ ಅಷ್ಟಾಗಿ ಅವಕಾಶವಾಗದ ರಾಜಕೀಯ ವಸ್ತುವನ್ನೂ ಕೂಡ ತಮ್ಮ ಪ್ರಯೋಗಶೀಲ ಮನಸ್ಸಿನ ಒರೆಗಲ್ಲೆಂಬಂತೆ 'ವಿಕಟ ಕವಿ ವಿಜಯ' ಎಂಬ ಗೀತನಾಟಕವನ್ನು ಬರೆದರು.

ವಸಾಹತುಶಾಹಿ ಆಡಳಿತಕ್ಕೆ ಅನೇಕ ಮಂದಿ ಹಲವು ರೀತಿಗಳಲ್ಲಿ ಸ್ಪಂದಿಸಿದರು. ದೇಶ ಪ್ರೇಮಿಗಳು, ಸ್ವಾತಂತ್ರ್ಯ ಚಳುವಳಿಗಾರರು ಕ್ರಿಯಾತ್ಮಕವಾಗಿ ನೇರವಾಗಿ ವಸಾಹತು ಆಡಳಿತವನ್ನು ವಿರೋಧಿಸಲು ಹೋರಾಟಕ್ಕೆ ಇಳಿದರೆ, ಸೃಜನಶೀಲ ಮನಸ್ಸಿನ ಕವಿ, ಕಲಾವಿದರು ತಮ್ಮ ತಮ್ಮ ಅಭಿವ್ಯಕ್ತಿ ಮಾಧ್ಯಮಗಳ ಮೂಲಕ ತಮ್ಮ ನಿಲುವು, ನಂಬಿಕೆಗಳನ್ನೂ, ತಾತ್ವಿಕ ಚಿಂತನೆಗಳನ್ನು ಅಭಿವ್ಯಕ್ತಿಸಿದರು. ಅನೇಕ ಸಂದರ್ಭಗಳಲ್ಲಿ ಈ ಸೃಜನಶೀಲ ಮನಸ್ಸುಗಳು ಭಾವನಾತ್ಮಕತೆಯಿಂದ ಹೊರಬಂದು, ತಮ್ಮ ಸಮಕಾಲೀನ ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ ಬೌದ್ಧಿಕವಾಗಿ, ವೈಚಾರಿಕವಾಗಿ ಪ್ರತಿಕ್ರಿಯಿಸುತ್ತಾರೆ. ತಮ್ಮ ಕಾಲದ ಪರಿಸರ. ಸಂವೇದನೆ, ಚಿಂತನೆಗಳಿಗೆ ತಾವಿರಿಸಿಕೊಂಡ ಕಲಾ ಮಾಧ್ಯಮಗಳ ಮಿತಿಯೊಳಗೇ ಅಭಿವ್ಯಕ್ತಿ ಕೊಡುವ ಪ್ರಯತ್ನವನ್ನು ಮಾಡುತ್ತಾರೆ. ಸೂಕ್ಷ್ಮ ಸಂವೇದನಾ ಶೀಲರಾದ ಯಾವ ಕಲಾವಿದರೇ ಆಗಲಿ ತಮ್ಮ ಕಾಲಕ್ಕೆ, ತಮ್ಮ ಪರಿಸರಕ್ಕೆ ಪ್ರಚಲಿತ ಸಮಸ್ಯೆಗಳಿಗೆ ಪರಿಸ್ಥಿತಿಗಳಿಗೆ ಕುರುಡಾಗಿ, ನಿಸ್ಪೃಹರಾಗಿ, ನಿಸ್ಪಂದರಾಗಿ ಇರಲು ಸಾಧ್ಯವೇ ಇಲ್ಲ. ಆದರೆ ಅಭಿವ್ಯಕ್ತಿಸುವ ಸಮಸ್ಯೆಗಳಿಗೆ ಪ್ರತಿಕ್ರಿಯಿಸುವ ರೀತಿಗಳು ಮಾತ್ರ ಬೇರೆ ಬೇರೆಯಾಗಿರುತ್ತವೆ.

ಇಂತಹ ಒಂದು ಗ್ರಹಿಕೆಯ ಹಿನ್ನೆಲೆಯಲ್ಲಿ ಪು.ತಿ.ನ. ಅವರ ಈ ನಾಟಕದ ಮೂಲಕ ಅವರ ರಾಜಕೀಯ ಆಲೋಚನೆಗಳನ್ನು, ತಾತ್ವಿಕ ನಿಲುವುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಸ್ವಾತಂತ್ರ್ಯ ಚಳುವಳಿಯ ಕಾವು ಯಾರನ್ನೂ ಸ್ಪರ್ಶಿಸದೆ ಉಳಿಸಲಿಲ್ಲ. ಅದರಲ್ಲಿಯೂ **1942**ರ ಕ್ವಿಟ್ ಇಂಡಿಯಾ ಚಳುವಳಿ ರಾಷ್ಟ್ರದ ಮೂಲೆ ಮೂಲೆಗೂ ವ್ಯಾಪಿಸಿ ದೇಶ ಪ್ರೇಮಿಗಳೆಲ್ಲರನ್ನು ಪ್ರಚೋದಿಸಿತು, ಮಹಾಪ್ರವಾಹದಂತೆ ಮಂದಿ ಹರಿದು ಬಂದು ಹೋರಾಟಕ್ಕಿಳಿದರು. ಸೆರೆ, ಸಾವು, ನೋವುಗಳು

ಎಲ್ಲೆಡೆಯೂ ಸಾಮಾನ್ಯವೆನ್ನುವಂತಾಯಿತು. ಪರಿಸ್ಥಿತಿ ಹೀಗಿರುವಾಗ ಪು.ತಿ.ನ. ಅಂಥವರೂ ಸುಮ್ಮನಿರಲಿಲ್ಲ. ಎದೆ ತುಂಬಿಸಿಕೊಂಡ ದೇಶ ಪ್ರೇಮವಿದ್ದರೂ, ಅಂದಿನ ರಾಜಕೀಯ ಪರಿಸ್ಥಿತಿಯ ಅರಿವಿದ್ದರೂ. ಬ್ರಿಟಿಷ್ ಆಡಳಿತಾಧಿಕಾರಿಗಳ ಅವರ ಪ್ರತಿನಿಧಿಗಳ ಸ್ವಾರ್ಥ. ಮಹತ್ವಾಕಾಂಕ್ಷೆ, ಅಧಿ ಕಾರಶಾಹಿತನ, ವಂಚನೆ ದ್ರೋಹ, ಕ್ರೌರ್ಯಗಳ ಸ್ಪಷ್ಟ ಕಲ್ಪನೆಯಿದ್ದರೂ, ಕ್ರಿಯಾತ್ಮಕವಾಗಿ ಪಾಲ್ಗೊಳ್ಳದೆ ತಾತ್ವಿಕವಾಗಿ ಸ್ಪಂದಿಸಿದರು, ಮಾನಸಿಕ ಕ್ಷೋಭೆಗೂ ಒಳಗಾದರು. ಈ ವರ್ಗಕ್ಕೆ ಸೇರಿದ ಪು.ತಿ.ನ. ಅವರು 'ವಿಕಟಕವಿ ವಿಜಯ' ನಾಟಕದ ಮೂಲಕ ವಸಾಹತು ಆಡಳಿತದ ವಿಭಿನ್ನ ಮುಖಗಳನ್ನು ಪರಿಚಯಿಸುತ್ತಾರೆ. ಇದು ಗೀತನಾಟಕವೇ ಆದರೂ ಇವರು ಬಳಸಿಕೊಂಡದ್ದು ವ್ಯಂಗ್ಯ ಶೈಲಿಯನ್ನು ಈ ಸಂದರ್ಭದಲ್ಲಿ ವ್ಯಂಗ್ಯ ಅವರಿಗೆ ಅತ್ಯಂತ ಪರಿಣಾಮಕಾರಿ ಅಸ್ತ್ರವಾಗಿ ಕಾಣಿಸುತ್ತದೆ. ತಮಗೆ ನೇರವಾದ ಅನುಭವವಿಲ್ಲದಿದ್ದರೂ, ಅನುಭವಿಸಿ ಸಂಕಷ್ಟಗಳಿಗೆ ಗುರಿಯಾದ ಗೆಳೆಯರಿದ್ದರು, ಅವರ ಅನುಭವಗಳೂ ಇದ್ದವು. ಒಮ್ಮೊಮ್ಮೆ ಸಂಕಷ್ಟಗಳಿಗೆ ಗುರಿಯಾಗಿ ಅನುಭವಿಸಿದವರಿಗಿಂತಲೂ, ಅನುಭವಿಸುವುದನ್ನು ನೋಡುವ ವರಿಗೆ ಇನ್ನೂ ಹೆಚ್ಚಿನ ಹಿಂಸೆಯಾಗುತ್ತದೆ. ಇಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಾಗ ಪು.ತಿ.ನ. ಅವರು ಹಿಡಿದ ಮಾರ್ಗ ಯಾವುದು? -ಎಂದು ಪ್ರಶ್ನಿಸುವಂತಾಗುತ್ತದೆ. ಒಮ್ಮೆ ಗೊರೂರರು ಸೆರೆಮನೆಯಲ್ಲಿದ್ದಾಗ ಪು.ತಿ.ನ. ಅವರಿಗೆ ಬರೆದ ತಮ್ಮೊಂದು ಪತ್ರದಲ್ಲಿ ಹೀಗೆ ಹೇಳಿದ್ದಾರೆ. -"ಉರಿಯ ನಡುವೆ ಹೊಕ್ಕುವರು ಸುಖಿಗಳು ಹತ್ತಿರವಿರುವವರನ್ನು ಕಿಡಿಗಳು ಸೀಯುತ್ತವೆ." - ಎಂಬ ಸುಭಾಷಿತದಂತೆ, ನನಗೆ ಅನುಭವವಾಯಿತು. ನಿನಗೆ ನಾನು ಮರುಗಲಿಲ್ಲ ಆದರೆ ನನಗೆ ನಾನೇ ಮರುಗಿಕೊಂಡೆ ಉದಾರ ಹೃದಯರಿಗೂ, ಧೀರರಿಗೂ ಹುರುಪುಳ್ಳವರಿಗೂ ನೀನು ಹಿಡಿದ ಮಾರ್ಗ ಸಹಜ, ಹೊರಗಿನ ಪರಿಸ್ಥಿತಿ ಹದಗೆಟ್ಟು ರೂಕ್ಷವಾಗಿರುವಾಗ, ಯಾತನೆಯಿಂದ ವಿಷಮವಾಗಿ ಅಂತಃ ಪ್ರಕೃತಿ ಅಸ್ಪಷ್ಟವಾಗಿರುವಾಗ ಬದುಕು ಭಾರವಾಗಿರುತ್ತದೆ.

"ಇವೆರಡಕ್ಕೂ ಸಾಮರಸ್ಯವನ್ನು ಕಲ್ಪಿಸಿಕೊಳ್ಳದೆ ವಿಧಿಯಿಲ್ಲ. ನಿನ್ನಂತೆ ಸೆರೆಮನೆಯನ್ನು ಹೊಕ್ಕು ಆ ಭೂತವನ್ನೆದುರಿಸುವುದು ಒಂದು ದಾರಿ; ಇಲ್ಲ ತಕ್ಕ ರಕ್ಷಣೆಯನ್ನು ಕಲ್ಪಿಸಿಕೊಂಡು ಅದನ್ನು ನಿಟ್ಟಿಸಿ ಅದರ

ಭಯವನ್ನು ನೀಗಿ ಕೊಳ್ಳುವುದು ಇನ್ನೊಂದು ದಾರಿ. ಅವರವರ ಎದೆಯ ಬಲವಿದ್ದಂತೆ ಇವೆರಡು ದಾರಿಗಳಲ್ಲಿ ಒಂದನ್ನು ಹಿಡಿದು ಬದುಕ ಬೇಕಾಗುತ್ತದೆ." -ಎಂದ ಈ ಮಾತುಗಳು ದೇಶ, ದೇಶ ಪ್ರೇಮ, ಸ್ವಾತಂತ್ರ್ಯ ಹೋರಾಟ -ಇತ್ಯಾದಿಗಳ ಬಗೆಗಿನ ವಿಚಾರಗಳನ್ನು ಸ್ಪಷ್ಟವಾಗಿ ವ್ಯಂಜಿಸುತ್ತದೆ.

ನಾಡು, ನುಡಿ ಸಂಸ್ಕೃತಿಗಳ ಬಗ್ಗೆ ಪು.ತಿ.ನ. ಅವರದು ತುಂಬು ಅಭಿಮಾನ. ಅವುಗಳಿಗೆ ಸಂಬಂಧಿಸಿದ ಯಾವುದೇ ವಿಚಾರಗಳಲ್ಲಿ ತೀವ್ರವಾಗಿ ತೊಡಗಿಸಿಕೊಳ್ಳುತ್ತಾರೆ. **1942** ರಿಂದ **1947** ರವರೆಗೆ ನಡೆದ ಸ್ವಾತಂತ್ರ್ಯ ಚಳುವಳಿ ಎಲ್ಲ ರೀತಿಯಿಂದಲೂ ಅವರನ್ನು ತಲ್ಲಣಗೊಳಿಸಿದೆ. ರಾಜ ಕಾರಣಿ ಅಲ್ಲದಿರಬಹುದು, ರಾಜಕೀಯ ಘಟನೆಗಳಲ್ಲಿ ಸಕ್ರಿಯವಾಗಿ ಭಾಗವಹಿಸದಿರಬಹುದು. ಯಾವುದೇ ಒಂದು ಪಕ್ಷದ ಅನುಯಾಯಿಯೂ ಅಲ್ಲದಿರಬಹುದು, ಆದರೆ ನಿಷ್ಠಾವಂತ ದೇಶಭಕ್ತ, ದೇಶ ಪ್ರೇಮಿ, ಸ್ವಾತಂತ್ರ್ಯ ಪ್ರೇಮಿ ಈ ದೇಶ, ದೇಶದ ಸಂಸ್ಕೃತಿ, ಘನತೆಯ ಬಗ್ಗೆ ಅವರಿಗೆ ಬಲವಾದ ನಂಬಿಕೆ ಮತ್ತು ಉತ್ಕಟ ಪ್ರೀತಿ. ಇವುಗಳಿಗೆ ಯಾವುದೇ ಬಗೆಯಲ್ಲಿಧಕ್ಕೆ ಬಂದರೆ, ಕ್ಷೋಭೆಗೆ, ಉದ್ವಿಗ್ನತೆಗೆ ಒಳಗಾಗುತ್ತಾರೆ. ಎದುರಿಸಲು ಎದೆ ಸೆಟೆದು ನಿಲ್ಲುತ್ತಾರೆ. ಪು.ತಿ.ನ. ಅವರಂತಹ ಸುಸಂಸ್ಕೃತ, ಸುಶಿಕ್ಷಿತ ವ್ಯಕ್ತಿತ್ವ ಮನಸ್ಸು ಪ್ರತಿಭಟನೆಗೆ ಆಯ್ದುಕೊಂಡದ್ದು ಸಾಹಿತ್ಯಾಸ್ತ್ರವನ್ನು 'ವಿಕಟಕವಿ ವಿಜಯ' ಗೀತನಾಟಕ ಅಂತಹ ಒಂದು ಅಸ್ತ್ರವಾಗಿ ಪರಿಣಮಿಸಿತು. ರಾಜಕೀಯ ತತ್ವಗಳ ಚಿಂತನೆಗೆ, ಸ್ವಾತಂತ್ರ್ಯ ಚಳುವಳಿ ಬಗೆಗಿನ ನಿಲುವುಗಳ ನಿರೂಪಣೆಗೆ, ವಸಾಹತುಶಾಹಿ ಸರಕಾರದ ಬಗೆಗಿದ್ದ ಅಸಮಾಧಾಗಳ ಅಭಿವ್ಯಕ್ತಿಗೆ, ರಾಜಕೀಯ ಆಶಯ, ಆದರ್ಶಗಳ ಪ್ರತಿಪಾದನೆಗೆ ಇಂತಹ ಒಂದು ಪ್ರಕಾರದ ಚೌಕಟ್ಟನ್ನು ಆರಿಸಿಕೊಂಡರು. ವ್ಯಂಗ್ಯ, ವಿಡಂಬನೆ, ಚಿಂತನೆಗಳಿಗೆ ಅನುಕೂಲಕರವಾದ ಸನ್ನಿವೇಶ, ಸಂದರ್ಭ, ಪಾತ್ರಗಳನ್ನು ಸೃಷ್ಟಿಸಿಕೊಂಡರು.

ಜೈಲು, ಜುಲ್ಮಾನೆ ಏಟು ಗೀಟು ಯಾವುದೂ ಇಲ್ಲದೆ, ಬಾಹ್ಯ ಪ್ರಕೃತಿಯ ನೈಷ್ಠುರ್ಯವನ್ನು ಆದಷ್ಟೂ ಕಡಿಮೆ ಮಾಡಿ ಒಳಗಿಗೆ ಹೊಂದಿಸಿಕೊಳ್ಳ ಬೇಕೆಂದು ನಾಟಕದ ದೊರೆಯನ್ನು ಸೃಷ್ಟಿಸಿಕೊಂಡರು. ಆತ್ಮದ ಆಕ್ರಂದನವನ್ನು ಹತೋಟಿಗೆ ತಂದು ಕೊಂಡು ಹೊರಗಿನ ಪರಿಸ್ಥಿತಿಗೆ

ಅಭಿಮುಖವಾಗಿ ನಿಲ್ಲುವ ದಾರ್ಢ್ಯವನ್ನು ಪಡೆಯಲೆಂದೇ "ವಿಕಟಕವಿಯನ್ನು ರೂಪಿಸಿದರು. ಧೈರ್ಯದ ಉದ್ದೀಪ್ತಿಗೆ ಗಾಂಧೀಜಿಯಂತಹ ಜನನಾಯಕನೊಬ್ಬನನ್ನು ಈ ಕೃತಕ ಪ್ರಪಂಚಕ್ಕೆ ತಂದರು. ಹೀಗೆ ಈ ಧ್ಯೇಯದ ಅವಕಾಶದಲ್ಲಿ ಈ ದೊರೆ ಮತ್ತು ವಿಕಟಕವಿಯ ನಡುವೆ ಕಲಾಸ್ವಪ್ನದ ಮೆರುಗನ್ನು ಹೊಂದಿ, ಭಾರತದಲ್ಲಿ ನಡೆದ ಸ್ವಾತಂತ್ರ್ಯ ಸಮಾರಂಭದ ವಿಪ್ಲವ ಒಂದು ದೇಶೀಯ ಸಂಸ್ಥಾನದಲ್ಲಿ ಹೇಗೆ ತೆರೆಯಿಟ್ಟಿತು ಎಂಬ ಇತಿಹಾಸ ಈ ನಾಟಕದಲ್ಲಿ ಹಾದುಹೋಗಿದೆ" - ಎಂದು ಪು.ತಿ.ನ. ಅವರೇ ಈ ನಾಟಕದ ವಸ್ತು, ಆಶಯಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಭಾರತ ದೇಶ ಅನೇಕ ಸಣ್ಣ ಪುಟ್ಟ ಸಂಸ್ಥಾನಗಳಾಗಿ ಹರಿದು ಹಂಚಿ ಹೋಗಿದ್ದವು. ಆದರೆ ಹೋರಾಟದ ಬಿರುಗಾಳಿ ಎಲ್ಲ ಸಂಸ್ಥಾನಗಳನ್ನು ತಟ್ಟಿತು. ಎಲ್ಲರೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಈ ಹೋರಾಟದ ಹಿನ್ನೆಲೆಯಲ್ಲಿ ಒಂದು ದೇಶೀಯ ಸಂಸ್ಥಾನದಲ್ಲಿ ನಡೆದ ಹೋರಾಟದ ಸ್ವರೂಪ, ಸ್ವಾತಂತ್ರ್ಯ ಬಂದ ನಂತರದ ಕ್ರಿಯೆ, ಪ್ರತಿಕ್ರಿಯೆ ಹೇಗಿದ್ದು ವೆಂಬುದನ್ನು ಸನ್ನಿವೇಶ, ಸಂದರ್ಭಗಳ ಮೂಲಕವಾಗಿ ನಿರೂಪಿಸಿದ್ದಾರೆ.

ಭಾರತದ ಸ್ವಾತಂತ್ರ್ಯದ ಜೊತೆಗೇ ದೇಶೀಯ ಸಂಸ್ಥಾನಗಳಿಗೂ ಬಿಡುಗಡೆ ದೊರೆತರೂ ಕ್ಷುಲ್ಲಕ ಮತ್ತು ಸ್ವಾರ್ಥಪರ ವಿಚಾರಗಳಿಂದಾಗಿ ಮತಭೇದದ ಅಡ್ಡ ಗೋಡೆಗಳು ಎದ್ದು ನಿಂತವು. ಮನುಷ್ಯ ಮನುಷ್ಯರ ನಡುವೆ ಇರಬೇಕಾದ ಪ್ರೀತಿ, ಸ್ನೇಹ ಸೌಹಾರ್ದಗಳಿಗೆ ಬದಲಾಗಿ ದ್ವೇಷ, ಅಸೂಯೆ, ದರ್ಪ, ದುರಭಿಮಾನಗಳಿಂದಾಗಿ ನೈತಿಕ ಪತನವಾಗಿ ಕೇವಲ ದುಃಖ, ನಿರಾಶೆ, ಹತಾಶೆಗಳೇ ತಾಂಡವ ವಾಡುವಂತಾಯಿತು. ಇಂತಹ ಪರಿಸ್ಥಿತಿ ವಾತಾವರಣವನ್ನು ವಿವರಿಸಲು ವ್ಯಂಗ್ಯ, ವಿಡಂಬನೆಯ ಅಸ್ತ್ರವನ್ನು ಬಳಸಿಕೊಳ್ಳುತ್ತಾರೆ.

ರಾಜಕೀಯ ಮನುಷ್ಯನಲ್ಲಿನ ಮನುಷ್ಯತ್ವವನ್ನೇ ಹೊಸಕಿ ಹಾಕುತ್ತದೆ. 'ಆಶೆ, ಔದಾರ್ಯಗಳ ತಿಕ್ಕಾಟ, ಸರಳತೆ, ಕುಟಿಲತೆಗಳ ಚೆಲ್ಲಾಟ, ದರ್ಪದಾಕ್ಷಿಣ್ಯಗಳ ಪರವಾಟ - ಇವು ರಾಜಕೀಯದ ಭೇದಕ ದೃಶ್ಯಗಳು' (ರಾಮಕೃಷ್ಣ ಜೋಶಿ ಪುತಿನ ಒಂದು ಅಧ್ಯಯನ ಪುಟ-79)

ಪ್ರತಿಯೊಂದು ಯುಗದಲ್ಲಿಯೂ ಇಂತಹ ಪರಿಸ್ಥಿತಿ ಸನ್ನಿವೇಶಗಳು ಪುನರಾವರ್ತನೆಗೊಳ್ಳುತ್ತಲೇ ಇರುತ್ತವೆ. ಸ್ಪಂದನ ಶೀಲ ಮನಸ್ಸುಗಳು ಆತ್ಮಗ್ಲಾನಿಗೆ ಒಳಗಾಗಿ ನರಳುತ್ತವೆ. ಅಸಹಾಯಕತೆಯಿಂದ ಮಿಡುಕುತ್ತವೆ; ಮರುಗುತ್ತವೆ. ಅಷ್ಟೇ ಅಲ್ಲದೆ ಸಂವೇದನಾಶೀಲ ಮನಸ್ಸು, ಸೃಜನಶೀಲ ಪ್ರತಿಭೆಯಿದ್ದವರು ತಮ್ಮ ನೋವು, ಅಳಲು, ಅನಿಸಿಕೆ, ಚಿಂತನೆಗಳಿಗೆ ಒಂದು ಅಭಿವ್ಯಕ್ತಿ ರೂಪವನ್ನು ಕೊಡುತ್ತಾರೆ. ಪು.ತಿ.ನ. ಅವರಂತಹವರ ಸೂಕ್ಷ್ಮಮನಸ್ಸು ತಮ್ಮ ಕಣ್ಮುಂದೆ ಸಂಭವಿಸುತ್ತಿರುವ ರಾಜಕೀಯ ಸ್ಥಿತ್ಯಂತರ ಗಳ ಬಗ್ಗೆ ಮೌಲ್ಯಗಳ ಉಚ್ಚಾಟನೆಗೆ ನಿಂತ ಮನುಕುಲದ ಬಗ್ಗೆ ತಮ್ಮ ನಿಲುವುಗಳನ್ನು ಒಂದು ನಿರ್ದಿಷ್ಟ ಕಾಲಘಟ್ಟದ ಸನ್ನಿವೇಶಗಳ ಮೂಲಕವಾಗಿ ಸ್ಪಷ್ಟ ಪಡಿಸುತ್ತಾರೆ.

1947 ರಲ್ಲಿ ಸ್ವರಾಜ್ಯ ದೊರೆಯಿತು. ಆದರೆ ದೇಶದಲ್ಲಿನ ಪರಿಸ್ಥಿತಿ ಅತ್ಯಂತ ನಿರಾಶಾದಾಯಕವಾಗಿತ್ತು 'ಬದುಕು ಹಸನಾಗಲೆಂದು ಸ್ವರಾಜ್ಯ ಬಯಸಿದೆವು. ಸ್ವರಾಜ್ಯ ಬಂದರೂ ಬದುಕು ಹಸನಾಗಲಿಲ್ಲ, ನಮ್ಮ ಧ್ಯೇಯಗಳ ಹಿಂಬದಿಯಲ್ಲಿ ದೈವದ ವಿಕಟಹಾಸವಿರುವಂತೆ ತೋರುತ್ತದೆ'....

'ಸ್ವರಾಜ್ಯ ಸಿದ್ಧಿಯಿಂದ ಕರ್ಮವಿರತಿಯನ್ನು ನಾಡು ಬಯಸಿದರೆ, ಸರ್ವ ಸಮೃದ್ಧಿಯ ಕನಸು ಕೈಗೂಡುವುದು ಹೇಗೆ? ಇದ್ದ ಅಲ್ಪ ಸ್ವಲ್ಪ ಸಿರಿಯ ಹಂಚಿಕೆ, ಈ ಹಂಚಿಕೆಯಲ್ಲಿ ಸ್ಪರ್ಧೆ, ಈ ಸ್ಪರ್ಧೆಯಿಂದ ಈರ್ಷ್ಯೆ ಹೀಗೆ ಮತ್ತೊಂದು ವಿಷಚಕ್ರ ಪ್ರಾರಂಭವಾಗಿರುವ ಹಾಗೆ ಅನೇಕರಿಗೆ ತೋರಿತು' ಬ್ರಿಟಿಷರು ತೊಲಗಿದರು. ಅವರನಾತ ಇನ್ನೂ ತೊಲಗಿಲ್ಲ. ಅದನ್ನು ಕೊಚ್ಚಿಕೊಂಡು ಹೋಗುವ ಮತ್ತೊಂದು ತೆರದ ದೇಶ ಪ್ರೇಮದ ಬಿರುಗಾಳಿಗೆ ನಾವು ಸ್ವಲ್ಪ ಕಾಲ ಕಾಯಲೇ ಬೇಕು-ಎನ್ನುವ ಈ ಮಾತುಗಳು 1949ರಲ್ಲಿ ಪ್ರಕಟವಾದ ಈ ನಾಟಕ ಕುರಿತು ಹೇಳಿದರೂ, ಇಂದಿಗೂ ಇದೇ ಪರಿಸ್ಥಿತಿ ಇದೆ. ಮನುಷ್ಯ ಸ್ವಭಾವಗಳಲ್ಲಿ ದೇಶದ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆ ಇಲ್ಲ. ಆಗ ಭುಗಿಲೆದ್ದ ಮತೀಯ ಗಲಭೆಗಳು ಕೋಮುವಾದಿ ನಿಲುವುಗಳು, ಪ್ರತ್ಯೇಕತಾವಾದದ ಪರಿಸರ-ಎಲ್ಲವೂ ಇನ್ನಷ್ಟು ಭೀಕರ, ಭಯಂಕರ ಸ್ವರೂಪವದಲ್ಲಿ, ಉಗ್ರವಾದವಾಗಿ ಪರಿಣಮಿಸಿ ಅಸಂಖ್ಯಾತ ನಿರಪರಾಧಿಗಳನ್ನು ಬಲಿ ತೆಗೆಮ

ಕೊಳ್ಳುತ್ತಿದೆ. ಬ್ರಿಟಿಷರು ಬಿಟ್ಟು ಹೋದ ಅವರ ಸಂಸ್ಕೃತಿಯ ಗಾಢ ಪ್ರೀತಿಯಿಂದಾಗಿ ಅವರ ಕಪಿ ಮುಷ್ಠಿಯಲ್ಲಿ ಬಿಡಿಸಿಕೊಳ್ಳಲಾಗದಷ್ಟು ಬಿಗಿದು ಕೊಂಡಿದ್ದೇವೆ. ಜಾಗತೀಕರಣ, ಉದಾರೀಕರಣ ಪ್ರಕ್ರಿಯೆಯಿಂದಾಗಿ ದೇಶೀಯವೆನ್ನುವ ಎಲ್ಲವೂ ವಿನಾಶದ ಅಂಚನ್ನು ತಲುಪುತ್ತಿದೆ ಸ್ವದೇಶದಲ್ಲಿದ್ದೂ ಪರಕೀಯತೆಯಭಾವದೊಂದಿಗೆ ಬದುಕಬೇಕಾದ ಅನಿವಾರ್ಯತೆಗೆ ಒಳಗಾಗಿಸಿಕೊಳ್ಳುತ್ತಿದ್ದೇವೆ. ಹೀಗಾಗಿ ಅಂದು ಅವರಾಡಿದ ಮಾತುಗಳು, ಅವರ ರಾಜಕೀಯ ಸಾಮಾಜಿಕ ಗ್ರಹಿಕೆಗಳು, ಚಿಂತನೆಗಳು -ಮತ್ತೆ ಮತ್ತೆ ನೆನಪಿಸಿಕೊಳ್ಳುವಂತಾಗುತ್ತದೆ. ಇಡೀ ನಾಟಕವ ಕಾಲಘಟ್ಟ **1947**ರ ಆಗಸ್ಟ್ **15**ರ ವರೆಗೆ ಮಾತ್ರ ಸೀಮಿತ. ಆದರೆ ಅಲ್ಲಿಯವರೆಗೆ ನಡೆದ ಹೋರಾಟ, ರಾಜಕೀಯ ವಿದ್ಯಮಾನಗಳ ಗ್ರಹಿಕೆಯ ಹಿನ್ನೆಲೆಯೊಂದಿಗೆ ನಾಟಕದ ಪರಿಕಲ್ಪನೆ ಯಾಗಿರುವುದರಿಂದ ಇದಕ್ಕೊಂದು ಐತಿಹಾಸಿಕ ಮಹತ್ವ ಲಭಿಸಿದೆ.

ಪು.ತಿ.ನ. ಅವರು ನಾಟಕಕಾರರಲ್ಲರಿದ್ದರೂ ತಮ್ಮ ನಾಟಕಗಳ ರಚನಾವಿನ್ಯಾಸವನ್ನು ವಸ್ತು ಮತ್ತು ತಮ್ಮ ತಾತ್ವಿಕ ಚಿಂತನೆಗಳು, ಆಶಯಗಳ ಸಂವಹನಕ್ಕೆ ಸಮರ್ಪಕವೂ ಧ್ವನಿಪೂರ್ಣವೂ ಆಗುವಂತೆ ರೂಪಿಸಿ ಕೊಳ್ಳುತ್ತಾರೆ. ಮುಖ್ಯವಾಗಿ 'ಅಹಲ್ಯೆ' ಮತ್ತು 'ವಿಕಟ ಕವಿ ವಿಜಯ' - ಈ ಎರಡೂ ನಾಟಕಗಳಲ್ಲಿ ಬರುವ ಅಂಕ ವಿನ್ಯಾಸ, ಒಂದೊಂದು ಅಂಕದಲ್ಲಿನ ಪ್ರಮುಖ ಅಥವಾ ಕೇಂದ್ರ ಚಿಂತನೆಯನ್ನು ಸೂಕ್ಷ್ಮವಾಗಿ ಕಟ್ಟಿ ಕೊಡುತ್ತದೆ.

ವಿನ್ಯಾಸಾಂಕ, ಉಪನ್ಯಾಸಾಂಕ ಮತ್ತು ಸಂನ್ಯಾಸಾಂಕ - ಹೀಗೆ ಮೂರು ಅಂಕಗಳಲ್ಲಿ ವಿನ್ಯಾಸಗೊಂಡ ಈ ನಾಟಕ, ದೇಶದ ಪ್ರಕ್ಷುಬ್ಧ ಪರಿಸ್ಥಿತಿ. **1942**ರ ಕ್ವಿಟ್ ಇಂಡಿಯಾ ಚಳುವಳಿ, ದೇಶ ಪ್ರೇಮದ ಉರುಬು ದೇಶಾಭಿಮಾನ ಪ್ರಚೋದಕ ಭಾಷಣಗಳ ಭರಾಟೆ, ಇವುಗಳ ನಡುವೆಯೂ ಜನ ಸ್ವಭಾವದಲ್ಲಿನ ಚಂಚಲತೆ,, ಸಮಯ ಸಾಧಕತನ, ಗುಂಪಿನ ಮನೋಧರ್ಮ, ಕಪಿ, ವಾಗ್ಮಿ, ಗಮಿ, ಪ್ರಚರಣ ಮಂತ್ರಿ, ವಾಗ್ಮಿ, ದಳಪತಿ, ಡಿ.ಜಿ.ಪಿ. ನ್ಯಾಯಾಧೀಶ, ರಾಜನೀತಿ ವಿಶಾರದ - ಹೀಗೆ ಎಲ್ಲ ವರ್ಗದ ಜನಪ್ರತಿನಿಧಿಗಳ ಸಮಾವೇಶ, ವೈಯಕ್ತಿಕ ಪ್ರತಿಭೆ ಪಾಂಡಿತ್ಯ, ಪ್ರತಿಷ್ಠೆ ಅಧಿಕಾರಗಳ ಬಗ್ಗೆ ಚರ್ಚೆ, ತಮ್ಮದೇ ಮೇಲೆಂದು ಸಾಧಿಸುವ ಪ್ರಯತ್ನಗಳು, ಪರಸ್ಪರರ ನಡುವೆ ಟೀಕೆ, ವ್ಯಂಗ್ಯ,

ಮುಂತಾದವುಗಳ ಚಿತ್ರದ ಜೊತೆಗೆ, ಪು.ತಿ.ನ. ಅವರ 'ಕವಿ ಪಕ್ಷಪಾತ' ದೃಷ್ಟಿ ಇಲ್ಲಿಯೂ ಕಾಣಿಸುತ್ತದೆ. ಗಮಕಿಯೇ ಎಲ್ಲ ದೃಷ್ಟಿಗಳಿಂದ ಶ್ರೇಷ್ಠನಾದರೂ ಅವನಿ ಗಿಂತಲೂ ಒಂದು ದೃಷ್ಟಿಯಿಂದ ಕವಿ ಮೇಲಿರುತ್ತಾನೆ. "ರಸವ ಹೊಳೆಸೆ ಕವಿ ಹೃದಯವು ಬೇಕು". ಎನ್ನುವ ಅಭಿಪ್ರಾಯದ ನಿಲುವಿಗೆ ಎಲ್ಲರೂ ಬರುವಂತೆ ಚಿತ್ರಿಸಿದ್ದಾರೆ.

ಪ್ರಜಾ ಸಂಕ್ಷೋಭೆ ಎಲ್ಲ ವರ್ಗದವರನ್ನೂ ಅಸ್ವಸ್ಥಗೊಳಿಸುವುದಂತೂ ಸತ್ಯ. ಇದರಿಂದಾಗಿ ಅವರಿಗೆ ಸಂಸ್ಥಾನಿಕ ನ್ಯಾಯಾಧೀಶರ ಇಚ್ಛಾಶಕ್ತಿಗಳಿಗೆ ತಲೆಬಾಗುವುದಕ್ಕಿಂತ ಸಾಮ್ರಾಟರ ಇಚ್ಛಾಶಕ್ತಿಗೆ ಮಣಿದು ನ್ಯಾಯದ ಆಳ್ವಿಕೆಗೆ ಒಳಗಾಗುವಂತಹ ವ್ಯಂಗ್ಯ ಪರಿಸ್ಥಿತಿ ಉಂಟಾಗಿದೆ.

ಒಂದು ಕಡೆ ಪ್ರಜೆಗಳ ಹೋರಾಟದ ಒತ್ತಡ ಮತ್ತೊಂದು ಕಡೆ ನಮ್ಮನ್ನಾಳುತ್ತಿರುವ ಸರಕಾರದ ಉಪಕಾರದ ಒತ್ತಡ, -ಪ್ರಜೆಗಳನ್ನು ಎದುರಿಸುವುದಾಗಲೀ, ಪ್ರಬಲರಾದ ಪ್ರಭುಗಳನ್ನು ಮೇಲೆ ಹಾಕಿಕೊಳ್ಳುವುದಾಗಲೀ ಸಾಧ್ಯವಾಗದ ಸಂದಿಗ್ಧದಲ್ಲಿ ಸಿಲುಕಿದ ಸಂಸ್ಥಾನದ ದೊರೆ ಮೊದಲ್ಗೊಂಡು ಎಲ್ಲ ಅಧಿಕಾರಿಗಳೂ ಒದ್ದಾಡುವ ಪರಿಸ್ಥಿತಿ, ಇಂತಹ ಪರಿಸ್ಥಿತಿಯ ಗಂಭೀರತೆಯನ್ನು ಅರಿತ ಪ್ರಧಾನಿ ಅಮಾತ್ಯರಿಗೆ,

ನೆರೆಬಂದರೆ ನೆರೆಯೊಡನೇ ತೇಲ್ವುದುಲೇಸು  
ವ್ಯರ್ಥ ಶ್ರಮ, ಬರಿ ಬಳಲಿಕೆ ನೆರೆಎದುರೀಸುವ  
ಬಲ ಏ ಸಾಧನ ಸಂಪತ್ತಿದೆ ಎಂದು  
ಸಾಮ್ರಾಜ್ಯವನೆದುರಿ ಜನ ನಿಂತಿದೆ ಇಂದು ?

(ವಿಕಟ ಕವಿ ವಿಜಯ - ಪು 29)

-ಎಂದು ಹೇಳುವ ಮಾತು ಕೇಳುವ ಪ್ರಶ್ನೆಗೆ ಒಂದೇ ಉತ್ತರ, -ಸಮಯಕ್ಕೆ ತಕ್ಕಂತೆ ಮುಂದೆ ಸಾಗುವುದು. ಅಸಹಾಯಕ ಸನ್ನಿವೇಶಗಳಲ್ಲಿ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಳ್ಳುವುದೇ ಕ್ಷೇಮಕರ. ಪರಿಸ್ಥಿತಿಗಳು ಬದಲಾಗುತ್ತವೆ. ತಮ್ಮನ್ನು ಅವುಗಳಿಗೆ ಹೊಂದಿಸಿಕೊಳ್ಳಬೇಕೆಂಬ ಪ್ರಯತ್ನಗಳೂ ಕೆಲವೊಮ್ಮೆ ವಿಫಲವಾಗುತ್ತದೆ. ಒಂದು, ಅಂದು ಇಂದೂ ಎಂದೂ ಮುಂದುವರೆದ ತಮ್ಮ ಅಸಹಾಯಕತೆ ಕಾರಣವಾದರೆ ಮತ್ತೊಂದು ಪ್ರತಿರೋಧಿ ಶಕ್ತಿಗಳು ಪ್ರಯತ್ನಗಳನ್ನು ಮೆಟ್ಟಿ ನಿಲ್ಲುತ್ತವೆ,

ಸಂಸ್ಥಾನದ ರಾಜ, ಪ್ರಜಾವಿರೋಧಿಯಾದ ಯಾವ ನಿರ್ಣಯಗಳಿಗೂ ಮುಂದಾಗದೆ, ಅವರ ಹೋರಾಟ ತ್ಯಾಗ, ದೇಶ ಪ್ರೇಮ, ಉತ್ಸಾಹ, ಆವೇಶಗಳಿಗೆ ಕಣ್ತೆರೆದು, ಅಲ್ಲಿಯವರೆಗಿನ ಕರ್ತವ್ಯ ಭ್ರಷ್ಟತೆಗೆ ನಾಚಿ ಇನ್ನಾದರೂ ಜನಪರವಾಗಿ ನಿಲ್ಲಬೇಕೆಂದು ಕೊಂಡರೂ ತಾನು 'ರಾಜ ಪ್ರತಿನಿಧಿ' ಎಂಬ ನೆನಪಿನಿಂದ, ತನ್ನ ಅಸಹಾಯಕತೆ, ಅಸಮರ್ಥತೆ, ಅರಸುತನದ ಅರ್ಥಹೀನತೆಗಳಿಂದ ತಳಮಳ ಗೋಡಿದ್ದರೆ, ಪ್ರಧಾನಿಗೆ ಅರಸೊತ್ತಿಗೆಯಲ್ಲಿಯೇ ನಂಬಿಕೆಯಿರುವುದು ವಿಚಾರ ಸಂಘರ್ಷಕ್ಕೆ ದಾರಿಯಾದರೂ ಕವಿಯ ಪ್ರಚೋದನೆಯಿಂದ, ದೃಢ ಮನಸ್ಸಿನಿಂದ 'ಭಾರತ ಬಿಟ್ಟು ತೊಲಗಿ' -ಚಳುವಳಿಯ ಪ್ರಮುಖ ಧ್ವನಿಯಾಗುತ್ತಾನೆ.

ಮುಂದಿನ ಉಪನ್ಯಾಸಾಂಕ ನಾಟಕದ ಹೃದಯ ಭಾಗ, ನಾಟಕಕಾರರಾದ ಪು.ತಿ.ನ. ಅವರ ರಾಜಕೀಯ ವಿಚಾರಧಾರೆ, ತಮ್ಮ ವೈಯಕ್ತಿಕ ಅಭಿಪ್ರಾಯ, ನಿಲುವುಗಳನ್ನು ಬಿಂಬಿಸುವುದಕ್ಕೆ ಇದು ಮಹತ್ವ ಪೂರ್ಣವಾದ ಅಂಕವಿನ್ಯಾಸವಾಗಿದೆ.

ಸ್ವರಾಜ್ಯಕ್ಕಾಗಿ ಹೋರಾಟ ನಡೆಯುತ್ತಿದ್ದ ಸಂದರ್ಭದಲ್ಲಿಯೇ ಎರಡನೇ ಜಾಗತಿಕ ಮಹಾಯುದ್ಧವೂ ಆರಂಭವಾಗಲು, ಬ್ರಿಟಿಷರು ಭಾರತೀಯರಿಗೆ ಸ್ವರಾಜ್ಯದ ಆಮಿಷದ ಮೂಲಕ ಸಂಧಿಗೆ ಪ್ರಯತ್ನಿಸಿದರೂ ಗಾಂಧೀಜಿಯಂತಹ ನಾಯಕರು ರಾಜಿಗೆ ಒಪ್ಪದೆ. ಯಾವುದೇ ಷರತ್ತುಗಳಿಲ್ಲದೆ ಭಾರತ ಬಿಟ್ಟು ತೊಲಗಿರೆಂದು ಬ್ರಿಟಿಷರನ್ನು ಒತ್ತಾಯಿಸಲು, ರೊಚ್ಚಿಗೆದ್ದ ಸರಕಾರ ದೇಶಪ್ರೇಮಿ ಹೋರಾಟಗಾರರ, ನಿರಪರಾಧಿ ಜನಸಾಮಾನ್ಯರ ಮಾರಣ ಹೋಮ ನಡೆಸಿತಾದರೂ, ಭಾರತೀಯರ ಛಲ, ಆತ್ಮಬಲಗಳ ಮುಂದೆ ಮಣಿದಯಿತಾದರೂ, ಭಾರತ ಸ್ವತಂತ್ರವಾಗಿ ವಿಜಯೋತ್ಸಾಹದ ಪ್ರಚಂಡಗಾಳಿಗೆ ಎದೆಯೊಡ್ಡಿ ನಿಂತ ಮುಂದಿ, ವಿಷಣ್ಣ ಕ್ಷಣಗಳಲ್ಲಿ, ಕೆಲವು ಜಾತಿವಾದಿಗಳಿಂದಾಗಿ, ಬ್ರಿಟಿಷರ ಕುಮ್ಮಕ್ಕಿನಿಂದಾಗಿ, ಅವರು ಬಿತ್ತಿಹೋದ ಜಾತಿ, ಮತ, ದ್ವೇಷದ ಬೀಜಗಳು ಸಿಡಿದು ಮೊಳಕೆಯೊಡೆದು ಶಾಂತಿ ಭಾರತ ಅಶಾಂತಿಯ ಕಡಲಾಗಿ ಪರಿವರ್ತಿಸಿತು. ಹಿಂದೂ ಮುಸ್ಲಿಂ ಪಂಗಡಗಳ, ನಡುವೆ ನಡೆದ

ಕೋಲಾಹಲ, ಘರ್ಷಣೆಗಳಿಂದಾಗಿ ರಕ್ತ ಪಾತವಾಯಿತು. ಮತೀಯ ಗಲಭೆಯ ಬೆಂಕಿಯ ಕೆನ್ನಾಲಗೆ ಎಲ್ಲೆಲ್ಲೂ ಚಾಚಿ ವಿಧ್ವಂಸಕ ನೋಟಗಳನ್ನೇ ಕಣ್ಮುಂದಿರಿಸಿತು. ಹಿಂದೂ ಮುಸ್ಲಿಂ ನಾಯಕರು ತಮ್ಮ ತಮ್ಮ ಜಾತಿ, ಮತ, ಕೋಮುಗಳ ಹಿರಿಮೆಯನ್ನೇ ಎತ್ತಿ ಹಿಡಿಯಲು ಪ್ರಯತ್ನಿಸಿದರು. ಪರಿಸ್ಥಿತಿ ಹೀಗಿರುವಾಗ ಸಹಬಾಳ್ವೆ, ಸ್ಥಿರಬಾಳ್ವೆ, ಸಮಾನತೆ, ಸೋದರತ್ವ -ಇವೆಲ್ಲವೂ ಕೇವಲ ಭ್ರಮೆಗಳಾಗುತ್ತವೆ. ಆತ್ಮಸ್ತುತಿ, ದುರಭಿಮಾನಗಳೇ ಪ್ರತಿಯೊಬ್ಬರ ವೈಯಕ್ತಿಕ ಬಂಡವಾಳವಾಗುತ್ತಿದೆ.

ಇಂತಹ ಗಂಭೀರ ಸನ್ನಿವೇಶದಲ್ಲಿ ಮತ್ತೆ 'ಕವಿ'ಯ ಪ್ರವೇಶವಾಗುತ್ತದೆ. ಪು.ತಿ.ನ. ತಮ್ಮೆಲ್ಲ ವಿಚಾರಗಳ ಮುಖವಾಣಿಯಾಗಿ ಕವಿ ಪಾತ್ರವನ್ನು ತಂದು ಅವನ ಜಾಣ್ಮೆಯ, ಅನುಭವದ, ಗಂಭೀರ ಚಿಂತನೆಯ ಮಾತುಗಳ ಮೂಲಕ ಪರಿಸ್ಥಿತಿಯನ್ನು ಒಂದು ಹದಕ್ಕೆ ತರುವ ಪ್ರಯತ್ನ ಮಾಡುವಂತೆ ಚಿತ್ರಿಸಿದ್ದಾರೆ. ಈ 'ವಿಕಟ ಕವಿ'ಯ ಉನ್ನತ ವಿಚಾರಗಳು, ಜಾತಿ ಮತಾತೀತವಾದ 'ದೇಶ' ಪರಿಕಲ್ಪನೆಯ ಅರ್ಥ ವಿವರಣೆ, ದಾರ್ಶನಿಕ ನಿಲುವು, ಸರ್ವಧರ್ಮ ಸಮನ್ವಯ ದೃಷ್ಟಿ ವಿಮರ್ಶೆಯ ಪ್ರಜ್ಞೆ, ಸಮಯ ಪ್ರಜ್ಞೆ ಇತ್ಯಾದಿಗಳು ಸಾಂಪ್ರದಾಯಿಕ ಸಂಸ್ಕೃತ ನಾಟಕಗಳಲ್ಲಿ ಬರುವ 'ವಿದೂಷಕ'ನ ಪಾತ್ರಕ್ಕಿಂತ ಮೇಲೆರಿಸುತ್ತವೆ. ಅವನು ವಿಕಟಕವಿಯಾದರೂ ಗಂಭೀರ ಚಿಂತನೆ ಮಾಡುವವನು ರಾಜನಾಗಿರಲಿ ರಹಮಾನ್ ಖಾನ್ ಆಗಿರಲಿ, ಅವನದು ಪ್ರಾಜ್ಞ ಬುದ್ಧಿ ಹೇಳುವ ವಿವೇಕವನ್ನು ಹೇಳುತ್ತಾನೆ. ಸನ್ನಿವೇಶ ಸಂದರ್ಭಗಳ ಗಂಭೀರತೆಯನ್ನು ಸರಿಯಾಗಿ ಅರ್ಥೈಸುತ್ತಾನೆ. ಸರಿಯಾದ ಸಲಹೆ, ಸೂಚನೆಗಳನ್ನು ನೀಡುತ್ತಾನೆ. ರಹಿಮಾನ್‌ಖಾನ್‌ನಂತಹವನಿಗೂ ಅವಕಾಶ ಸಿಕ್ಕಾಗ ಧರ್ಮ, ದೇವರು, ಶಾಂತಿಗಳ ಬಗ್ಗೆ ಮಾನವೀಯ ನೆಲೆಯಿಂದ ಯೋಚನೆ ಮಾಡಲು ಪ್ರಚೋದಿಸುತ್ತಾನೆ. ಹಿಂದೂ, ಮುಸ್ಲಿಂ ಧರ್ಮಗಳಲ್ಲಿ ಯಾವುದೇ ಮೂಲಭೂತ ವ್ಯತ್ಯಾಸಗಳಿಲ್ಲ, ಆದ್ದರಿಂದ ಸರ್ವಧರ್ಮಸಮಾನತೆಯೇ ಸಮಸ್ಯೆಗಳಿಗೆ ಪರಿಹಾರವೆನ್ನುವುದು ವಿಕಟ ಕವಿಯ ನಂಬಿಕೆ. ಆದ್ದರಿಂದಲೇ ಅವನ ಪರಿಭಾಷೆಯಲ್ಲಿಯೇ ಅವನಿಗೆ ಉತ್ತರ ಮತ್ತು ಜಾಗೃತಿಗೆ ಮುಂದಾಗುತ್ತಾನೆ.

"ಅಮ ದೈ-ಒಪ್ಪಿದೆ - ರಹಿಮಾನ್
ಅಲ್ಲಾ ಒಬ್ಬನೆ ಈ ಜಗಕೆಲ್ಲಾ
ಅವನ ಹೊರತು ಮತ್ತಾರೂ ಇಲ್ಲ
ಈ ತಿರೆಯೆಲ್ಲಾ ಅಲ್ಲನ ತೋಟ
ಕಾಬೂಲಿನ ದಾಳಿಂಬೆಯ ಹಣ್ಣು
ನಮ್ಮೀ ನಾಡಿನ ಮಾವಿನ ಹಣ್ಣು
ಆವುದು ಬೇಕು ಆವುದು ಬೇಡ
ಈ ತೆರ ಅಲ್ಲನ ದಯೆ ಬಹುಗಾಢ
ಆ ಖರ್ಜೂರ ಈ ಅಂಜೂರ
ರುಚಿಬಲ್ಲಗಿಲ್ಲ ಹತ್ತಿರ ದೂರ
ಹದಗೊಳಿಸಯ್ಯಾ ಮನದನಾಲಿಗೆ
ಬಿಟ್ಟಿ ಕೊಳ್ಳದಿರು ಒಂದೇ ಮೇವಿಗೆ
ಸಖಿ ರಹಿಮಾನ್, ನಾಡಿನ ಮಗನಾಗು"

-(ಸ. ಗೇ. ನಾ. ವಿ. ಕ. ವಿ. ಪು - 617)

-ಎನ್ನುವಲ್ಲಿ ಸೂಕ್ಷ್ಮವಾಗಿ ಎಲ್ಲ ಧರ್ಮಗಳೂ ಒಂದೇ, ಆದರೂ ವೈಯಕ್ತಿಕ ದೇವರುಗಳ, ಧರ್ಮಗಳ ಬಳಿಸಾರುವುದಕ್ಕೂ ಮೊದಲು ನಾವು ಬದುಕಿ ಬಾಳುತ್ತಿರುವ ರಾಷ್ಟ್ರ ಧರ್ಮ ಮುಖ್ಯವಾಗಬೇಕೆನ್ನುವ ಸಂದೇಶವಿದೆ.

ಪು.ತಿ.ನ. ಅವರು ಅವಕಾಶವಾದಾಗಲೆಲ್ಲ ಸಂದರ್ಭ ಸನ್ನಿವೇಶಗಳ ಹಿನ್ನೆಲೆಯಲ್ಲಿ ಜಾತಿ - ಮತ, ಧರ್ಮಗಳ ಸ್ವರೂಪ, ಅಂತರ್ನಿಹಿತ ಆಶಯಗಳನ್ನು ಸೂಕ್ಷ್ಮವಾಗಿ ವಿವರಿಸುತ್ತಾರೆ.

ಸ್ವಾತಂತ್ರ್ಯ ಬಂದ ಶೈಶವದಲ್ಲಿ ಒಂದೆಡೆ ಅರಸರ ಆಂತರಿಕ ಜೀವನದಲ್ಲಿ ಅಧಿಕಾರವಿಲ್ಲದ ರಾಜತ್ವವನ್ನು ಉಳಿಸಿಕೊಳ್ಳುವ ಹಂಬಲ ಹೊಯ್ದಾಟವಿದ್ದರೆ ಇನ್ನೊಂದೆಡೆ ಪ್ರಜಾಧಿಕಾರದ ಹೊಸ ವ್ಯವಸ್ಥೆಯ ಮಾರ್ಪಾಡಿಗಾಗಿ ಜನ ತುಡಿಯುತ್ತಿದ್ದ ಸಂದರ್ಭ ಮುಖಾಮುಖಿ ಯಾಗುತ್ತಿದ್ದ ಇಂತಹ ಸಂಕೀರ್ಣ ಕಾಲಘಟ್ಟವನ್ನು ಅತ್ಯಂತ ಸಮರ್ಪಕವಾಗಿ ನಿರ್ವಹಿಸಿದ್ದಾರೆ.

ಕೊನೆಯದಾದ ಸಂನ್ಯಾಸಾಂಕ, ಹಿಂದಿನ ಎಲ್ಲ ಘಟನಾವಳಿಗಳಿಗೆ, ರಾಜಕೀಯ ಸಂಘರ್ಷಗಳಿಗೆ, ವಿಚಾರಗಳ ತಾಕಲಾಟಕ್ಕೆ, ಮಾನಸಿಕ ತೊಳಲಾಟಗಳಿಗೆ ಒಂದು ಮುಗಿತಾಯವನ್ನು ಸೂಚಿಸುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತಾದರೂ, ಅದು ದೊರೆತದ್ದು 'ಭಯಂಕರ ಸಮಸ್ಯೆಗಳ ಜೇನು ಹುಟ್ಟ' ನೊಂದಿಗೆ, ಕೊಡುವ ಮನಸ್ಸಿಲ್ಲದೆ ಕೊಟ್ಟದ್ದೂ ಕೂಡಾ ಮತೀಯ ದ್ವೇಷದ ಬೀಜಗಳನ್ನು ಬಿತ್ತಿ!! ಭಾರತ ವಿಭಜನೆಯೇ ರಾಜಕೀಯ ವಾಗ್ವಾದಕ್ಕೆ ಪರಿಹಾರವೆಂದು ಭಾವಿಸಿದ ಜಿನ್ನಾನಿಗೂ ನಂತರದ ಸಮಸ್ಯೆಗಳು ಬೆಂಕಿಯ ಮುಳ್ಳುಗಳಾಗುತ್ತವೆ.

ಪ್ರಜಾಧಿಕಾರಕ್ಕೆ ಮಣಿದು, ರಾಜತ್ವಬಿಟ್ಟು "ಹೊಸ ಕಾಲಕ್ಕೆ ತಕ್ಕುದು ಹೊಸ ದೃಷ್ಟಿ" ಎಂದು ತಾತ್ವಿಕವಾಗಿ ಬದಲಾದರೂ ಮುಸ್ಲಿಂ ಮುಖಂಡರು ಮಾತ್ರ ರಾಜನ ವಿವೇಕ ದೂರ ದೃಷ್ಟಿ, ವಿವೇಕ, ಔದಾರ್ಯಗಳನ್ನಾಗಲೀ, ಕಾಂಗ್ರೆಸ್ಸಿನ ಸೌಹಾರ್ದತೆ, ಸಮತೆ, ಸಹಬಾಳ್ವೆ ಸರ್ವಧರ್ಮ ಸಹಿಷ್ಣುತೆ ಇತ್ಯಾದಿ ಉದಾತ್ತ ಗುಣಗಳಾಗಲೀ ಇಲ್ಲದೆ, ದೊರೆಯ ಆಶ್ರಯದಲ್ಲಿ ಮಾತ್ರವೇ ಜಾತಿ,ಮತ,ಧರ್ಮ ಇತ್ಯಾದಿ ಹಿತಾಸಕ್ತಿಗಳ ರಕ್ಷಣೆಯೆಂದು ನಂಬಿದ್ದು ಜಾತ್ಯಾತೀತವಾದ, ಧರ್ಮ ನಿರಪೇಕ್ಷವಾದ ಸಮತೆ ಸಹಿಷ್ಣುತೆಗಳ ಮೇಲೆ ನಿರ್ಮಾಣವಾದ ಕಾಂಗ್ರೆಸ್ ರಾಜ್ಯವ್ಯವಸ್ಥೆ, ಹೊಸ ಸಾಮಾಜಿಕ ವ್ಯವಸ್ಥೆಗಳನ್ನು ಸಂಕೋಚ ದಿಂದಲೇಕಂಡು, ಸಮಾನತೆ' ಎನ್ನುವುದನ್ನು 'ಗುಲಾಮ' ಎಂದು ಅರ್ಥೈಸಿ, ತಮ್ಮ ತಾಯ್ನಾಡಿನಲ್ಲೇ ತಮ್ಮ ಸ್ವಸ್ಥತೆಯನ್ನು ಕಳೆದುಕೊಂಡು, ತಮ್ಮ ಪ್ರತ್ಯೇಕತೆಗಾಗಿ ಬೇಡಿ ರೆಸಿಡೆಂಟರಲ್ಲಿಗೆ ಹೋಗುವುದಷ್ಟೇ ಅಲ್ಲ, ತಮ್ಮ ಮುಸ್ಲಿಂ ಬಂಧುಗಳನ್ನು, ಜಾತಿ, ಧರ್ಮ ಜಡರಾದ ಹಿಂದುಗಳನ್ನು ಸ್ವಜನರ ಮೇಲೆಯೇ ಎತ್ತಿಕಟ್ಟಿ ಸಮಸ್ಯೆಗಳ ಪರಿಹಾರಕ್ಕೆ ರೆಸಿಡೆಂಟರಲ್ಲದೆ ಬೇರೆ ಯಾರಿಂದಲೂ ಸಾದ್ಯವಾಗದೆಂಬ ಅಸಹಾಯಕ ಸ್ಥಿತಿಯನ್ನು ನಿರ್ಮಿಸುತ್ತಾರೆ. ಆದರೆ ರೆಸಿಡೆಂಟ್ ಯಾವಾಗಲೂ ಬ್ರಿಟಿಷರ ಪರವೆಂದು ಅರ್ಥಮಾಡಿಕೊಳ್ಳದೆ ಅವನನ್ನೇ ತಮ್ಮ ಉದ್ಧಾರಕನೆಂಬ ಹುಂಬ ನಂಬಿಕೆಯನ್ನು ಪಂಚಿಸಿ ಪೊಳ್ಳು ಭರವಸೆಯಿತ್ತು, ಹೊತ್ತಿ ಉರಿಯಲು ಆರಂಭಿಸಿದ್ದ ಕೋಮುದ್ವೇಷವನ್ನು ಮತ್ತಷ್ಟು ಉರುಬುವಂತೆ ಮಾಡುತ್ತಾನೆ.

ರಾಜತ್ವ ರಾಜಾಧಿಕಾರಗಳಲ್ಲಿ ಭ್ರಮನಿರಸನ ಗೊಂಡ ರಾಜನ ಪ್ರಜಾಧಿಕಾರದ ವಿಶ್ವಾಸ ಬಲಗೊಳ್ಳುತ್ತದೆ. ಸ್ವಾತಂತ್ರ್ಯ ಪಡೆಯುವುದರೊಂದಿಗೆ ಪರಾಡಳಿತದ ಹೊಲೆತನ ಕಳೆದು ದ್ವಿಜತ್ವ ಪ್ರಾಪ್ತವಾಗಿರುವಾಗ, ದ್ವಿಜ ಅಂತ್ಯಜ ಎಂಬ ಭೇದ ಅರ್ಥಹೀನವೆನಿಸುತ್ತದೆ.

"ಮತಕಾಲವಲ್ಲ ಹೊಸಕಾಲವಿದು ಹಿತಕೆಲ್ಲವ
ಬಳಸುವ ಕಾಲವಿದು
ವಿಜ್ಞಾನದಂತೆ ಮತವೂ ಕೂಡಾ
ಎಲ್ಲರ ಹದುಳಕ್ಕೊದಗಲು ಬೇಡವೇ ?"

- ಎನ್ನುವುದು ದೊರೆಯ ಬದಲಾದ ಧೋರಣೆಗೆ ನಿದರ್ಶನ. ಸಂಸ್ಥಾನದ ಉತ್ತರಾಧಿಕಾರ ಏಕ ವ್ಯಕ್ತಿಯಿಂದ ರವಾನಿಸುವ, ಪ್ರಜಾಪ್ರತಿನಿಧಿಗಳಾಗಿ ಆಡಳಿತವನ್ನು ವಹಿಸಿಕೊಳ್ಳುವ ಅವನ ಪ್ರಾರ್ಥನೆಗೆ ರೆಸಿಡೆಂಟ್ ಆಪ್ತಸಚಿವರ ನಿರಾಕರಣೆ, ಜನನಾಕಯನ ಹೆಗಲಿಗೆ ಜವಾಬ್ದಾರಿ ವಹಿಸುವತ್ತ ಪ್ರೇರೇಪಿಸುತ್ತದೆ.

'ವಿಕಟ ಕವಿ ವಿಜಯ' ಪು.ತಿ.ನ. ಅವರ ರಾಜಕೀಯ ಚಿಂತನೆಗಳಿಗೆ ಒಂದು ಸಮರ್ಪಕ ವೇದಿಕೆಯಂತೆ ಪರಿಣಮಿಸಿದೆ. ತಮ್ಮ ನಿಲುವು, ಚಿಂತನೆಗಳೆಲ್ಲವೂ ಪಾತ್ರ, ಸನ್ನಿವೇಶಗಳ ಮುಖೇನ ಅಭಿವ್ಯಂಜಿಸಲು ವಿಸ್ತಾರವಾದ ನೆಲೆಗಟ್ಟನ್ನು ಒದಗಿಸಿಕೊಟ್ಟಿದೆ.

ಪ್ರೀತಿ, ಪ್ರೇಮ, ಕಾಮ, ಮಾನವೀಯ ಸಂಬಂಧಗಳು ಧರ್ಮ ದೇವರು, ಸೌಂದರ್ಯ, ಪ್ರಕೃತಿ ಮುಂತಾದವುಗಳ ಸುತ್ತ ಪರಿಭ್ರಮಿಸುವ ಮನಸ್ಸು ರಾಜಕೀಯ, ಸಾಮಾಜಿಕ ವಿಚಾರಗಳ ಮಂಡನೆಗೆ ಹೊರಡುವಾಗ, ಅವರು ಅತಿಯಾಗಿ ಪ್ರೀತಿಸುವ ಭಾವನಾತ್ಮಕ, ತೀವ್ರ ಸಂವೇದನಾತ್ಮಕ ಆವರಣದ ಹೊರಗೆ ಉಳಿಯ ಬೇಕಾಗುವುದರಿಂದ, ಅದಕ್ಕೆ ಸಮರ್ಪಕವಾದ, ಸಮರ್ಥವಾದ ನಿರೂಪಣಾ ತಂತ್ರ ಅಥವಾ ಸಂವಿಧಾನವೊಂದನ್ನು ರೂಪಿಸಿಕೊಳ್ಳುತ್ತಾರೆ. ಆದ್ದರಿಂದಲೇ ಅವರ ಗೀತನಾಟಕಗಳು, ಒಂದೊಂದೂ ಭಿನ್ನವಾಗಿವೆ. ಚಿಂತನ ಸಾಮಗ್ರಿಯ ಗಂಭೀರತೆ, ಸೂಕ್ಷ್ಮತೆಗಳಿಗನು ಗುಣವಾಗಿ, ಆಶಯಗಳಿಗೆ ಅನುಗುಣವಾಗಿ ಆಕಾರಗಳನ್ನು, ಸಂವಿಧಾನ ಶೈಲಿಗಳನ್ನು ರೂಢಿಸಿಕೊಳ್ಳುತ್ತಾರೆ.

ಲಘು ಲಹರಿಯ, ರಸ, ಸೌಂದರ್ಯ, ಪ್ರಕೃತಿ, ಭ
ಮುಂತಾದವುಗಳನ್ನು ಕೇಂದ್ರವಾಗಿಸಿ ಕೊಂಡ ಗೀತನಾಟಕಗಳಲ್ಲಿ ಗೇಯತೆಗೆ
ರಾಗ - ಸ್ವರ ಸಂಯೋಜನೆಗೆ ಹೆಚ್ಚಿನ ಒತ್ತನ್ನು ಕೊಡುತ್ತಾರೆ. ರಂಜನೀಯ
ಕತೆಯು ಪ್ರಧಾನ ಅಂಶಗಳಲ್ಲಿ ಒಂದಾಗಿರುವಾಗ, ಗಾಢ ಚಿಂತನೆಗಳ
ಸಂವಹನ ಪ್ರೇಕ್ಷಕರಿಗೆ ಸುಲಭ ಸಾಧ್ಯವಾಗುವುದಿಲ್ಲ. ಗೇಯ ಮಾಧುರ್ಯತ
ಯಿಂದಾಗಿ, ಲಯ, ಪ್ರಾಸಗಳ ಮೋಹಕತೆಯಿಂದಾಗಿ ನಿಕ್ಷಿಪ್ತ ಅರ್ಥಗಳು
ಎಲ್ಲಿಯೋ ಕಳೆದು ಹೋಗುತ್ತವೆ. ಆದ್ದರಿಂದಲೇ ಬಹುಶಃ ಈ ವಾಸ್ತವ
ಸತ್ಯದ ಅರಿವಿನಿಂದಾಗಿಯೇ ಅಹಲ್ಯೆ, ಸತ್ಯಾಯನ ಹರಿಶ್ಚಂದ್ರ, ವಿಕಟ ಕವಿ
ವಿಜಯ ದಂಥ ನಾಟಕಗಳಲ್ಲಿ ರಾಗಗಳಾಗಲೀ ಸ್ವರ ಪ್ರಸ್ತಾರಗಳಾಗಲೀ
ಕಾಣುವುದಿಲ್ಲ. ನಾಟಕಗಳನ್ನು ನಿರ್ದೇಶಿಸುವ. ಪ್ರದರ್ಶಿಸುವ ವ್ಯಕ್ತಿಗಳಿಗೆ
ಅವುಗಳ ಸಂವಹನ ಸಾಧ್ಯತೆಗಳ ಬಗ್ಗೆ ಆಲೋಚಿಸುವ ಒಂದು
ಸ್ವಾತಂತ್ರ್ಯವನ್ನು ಕಲ್ಪಿಸಿದ್ದಾರೆ.

ಪು.ತಿ.ನ. ಮೂಲಭೂತವಾಗಿ ಚಿಂತನಶೀಲಕವಿ 'ರಂಗೋಲಿ'
ಯಂತಹ ಸಣ್ಣ ಕವಿತೆ, ಸರಳ ಕವಿತೆಯಿಂದ ಹಿಡಿದು ಅಧ್ಯಾತ್ಮಿಕ,
ಅನುಭಾವಿಕ ನೆಲೆಗಳನ್ನು ಒಳಗೊಂಡ ಯದುಗಿರಿಯ ಮೌನ ವಿಕಾಸ
ದಂತಹ ಕವಿತೆಗಳವರೆಗೆ ಅವರ ಕಾವ್ಯ ಸೃಷ್ಟಿಯು ಹರಿವಿದೆ. ಆದರೆ
ಪ್ರತಿಯೊಂದು ಕವಿತೆಯಲ್ಲೂ ಯಾವುದೋ ಒಂದು ನೆಲೆಯಲ್ಲಿ ಒಂದು
ತಾತ್ವಿಕ ಚಿಂತನೆಯ ಅಂಶ ಅನಿವಾರ್ಯವಾಗಿ ಹುದುಗಿರುತ್ತದೆ. ಚಿಂತನೆ
ಅಧ್ಯಾತ್ಮಿಕ, ಅನುಭಾವಿಕ ನೆಲೆಯಲ್ಲಿಯೇ ಇರಬೇಕೆಂದೇನೂ ಇಲ್ಲ. ದಿನ
ನಿತ್ಯದ ಸಣ್ಣ ಪುಟ್ಟ ಅನುಭವಗಳು, ತನ್ನ ಮತ್ತು ತನ್ನ ಸುತ್ತಲಿನ
ಸಮಾಜದಲ್ಲಿ, ಬದುಕಿನಲ್ಲಿ ಮುಖಾ ಮುಖಿಯಾಗುವ ಸನ್ನಿವೇಶಗಳು,
ವ್ಯಕ್ತಿಗಳೂ ಕೂಡಾಬದುಕಿನ ದ್ವಂದ್ವಗಳ ಮೌಲ್ಯ ಸಂಘರ್ಷಗಳ
ಮಾನವೀಯ ಸಂಬಂಧಗಳ, ಹುಟ್ಟು, ಸಾವು, ಅಸ್ತಿತ್ವಗಳ ಬಗ್ಗೆ
ಚಿಂತನಶೀಲ ಪ್ರವೃತ್ತಿಯ ಮನಸ್ಸುಗಳನ್ನು ಕದಡಿ, ಕಲಕಿ, ಕಟುವಾಸ್ತವಗಳ,
ಸತ್ಯಗಳ ಸಾಕ್ಷಾತ್ಕಾರದತ್ತ ತುಡಿವಂತೆ ಪ್ರಚೋದಿಸುತ್ತವೆ. ಹಾಗಾಗಿ
ಪು.ತಿ.ನ. ರಂತಹ ಕವಿ ಸದಾ ಜಾಗ್ರತ ಪ್ರಜ್ಞೆಯೊಂದಿಗೆ ಬುದ್ಧಿ,
ಮನಸ್ಸುಗಳನ್ನು ಎಚ್ಚರದೊಳಿರಿಸಿ, ಅನುಭವಗಳಿಗೆ ಸ್ಪಂದಿಸುತ್ತ, ಚಿಂತನೆಯ
ಕ್ರಿಯೆಗೆ ಒಳಗಾಗಿಸುತ್ತ ತಾವು ಕಂಡ ಜೀವನ ಸತ್ಯಗಳನ್ನು ತಮ್ಮ ಅಭಿವ್ಯಕ್ತಿ

ಮಾಧ್ಯಮಗಳ ಮೂಲಕ ಓದುಗ ಸಹೃದಯರಿಗೆ ಸಾಕ್ಷಾತ್ಕರಿಸಿಕೊಡುತ್ತಾರೆ.

ಜೀವನದ ಪ್ರತಿಯೊಂದು ಅನುಭವವನ್ನು ಕಾವ್ಯವಾಗಿಸಿದ್ದಾರೆ, ತಾತ್ವಿಕ ಚಿಂತನೆಗೆ ಗುರಿಯಾಗಿಸಿ ಕೊಂಡಿದ್ದಾರೆ, ಸಾಮಾನ್ಯವಾಗಿ ತಾತ್ವಿಕತೆ ಕಾವ್ಯಶಿಲ್ಪ ಸೌಂದಯಕ್ಕೆ ಮಾರಕವಾಗಬಹುದೆಂಬ ಅನುಮಾನ ಏದೆಯಾದರೂ, ಪು.ತಿ.ನ. ಅವರ ಕವಿತೆಗಳು ಮಾತ್ರ ಕಾವ್ಯ ಸೌಂದರ್ಯ ತಾತ್ವಿಕ ಚಿಂತನೆಗಳೆರಡನ್ನೂ ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಮೇಳೈಸಿಕೊಂಡಿದೆ. ಕಾವ್ಯ, ತಾತ್ವಿಕತೆಗಳು ಬೇರೆ ಬೇರೆಯಲ್ಲ, ಪ್ರತಿಭಾವಂತ ಕವಿಯ ಕಾವ್ಯ ಸೃಷ್ಟಿಯಲ್ಲಿ ಈ ಎರಡೂ ಅಂಶಗಳು ಅನನ್ಯವಾಗಿ, ಸಹಜವಾಗಿ ಮತ್ತು ಅನಿವಾರ್ಯವೆಂಬಂತೆ ಬರುತ್ತವೆ. ಪ್ರತಿಯೊಂದು ಸೃಜನಶೀಲ ಅಭಿವ್ಯಕ್ತಿಯ ಹಿಂದೆ ಪು.ತಿ.ನ. ಅವರ ದರ್ಶನವಿದೆ; ಚಿಂತನೆಯಿದೆ ತಾವು ಬದುಕುತ್ತಿರುವ ಈ ಜಗತ್ತಿನ, ಈ ಸಮಾಜದ ವಾಸ್ತವಾನುಭವಗಳ ಜೊತೆ ಜೊತೆಯಲ್ಲಿ ಅವರ ಅದ್ಭುತ ಕಲ್ಪನಾಶಕ್ತಿಯ ಬೆಸುಗೆಯಿಂದಾಗಿ, ಕಾವ್ಯ, ನಾಟಕಗಳಲ್ಲಿ ತಾತ್ವಿಕತೆಯ ಅಂಶಗಳು, ಅಭಿವ್ಯಕ್ತಿ ರೂಪ, ರಚನೆಗಳೊಂದಿಗೆ ಸಾಮರಸ್ಯದೊಂದಿಗೆ ಕಾಣಿಸಿಕೊಳ್ಳುತ್ತವೆ. ಈಗಾಗಲೇ ಅಪಾರ ಸಂಖ್ಯೆಯಲ್ಲಿ ಬರೆದಿರುವ ಕವಿತೆಗಳಲ್ಲಿ, ಮಲೆದೇಗುಲ, ಹೊನಲಹಾಡು, ಒಲುಮೆ ಹೊನಲ ತಡೆಗಳು, ಕಣಿವೆಯ ಮುದುಕ, ತ್ಯಾಗವೆ ಒಲುಮೆ, ದೀನಗಿಂತ ದೇವಬಡವ, ಚಿಕಹೂ, ಅಂತರ್ಯಾಮಿಯ ಸೋಗಿನ ದರ್ಶನ, ವಿಶ್ವಕುಟುಂಬಿಯ ಕಷ್ಟ ಮುಂತಾದ ಹಲವಾರು ಕವಿತೆಗಳಲ್ಲಿಯೂ ಒಂದು ಕೇಂದ್ರಚಿಂತನೆ ಸ್ಥಾಯಿಯಾಗಿ ಕಾಣಿಸಿಕೊಂಡು, ಬದುಕು, ಮಾನವ ಸಂಬಂಧಗಳು, ಪ್ರಕೃತಿಯ ಬಗೆಗಿನ ತಮ್ಮ ನಿಲುವುಗಳನ್ನು ಬಿಂಬಿಸುತ್ತಾರೆ.

ದೇವರು, ಪ್ರಕೃತಿಯಂತೂ ಅವರಿಗೆ ಸೌಂದರ್ಯ ರಸಾನುಭೂತಿಯ ತಾಣಗಳು, ಆನಂದಾನುಭವ ಕೇಂದ್ರಗಳು. ಆದ್ದರಿಂದಲೇ ಅವರ ಕವಿತೆಗಳಲ್ಲಿ ಗೀತನಾಟಕಗಳಲ್ಲಿ ಇವೆರಡೂ ಪ್ರಧಾನ ವಸ್ತು ಕೇಂದ್ರಗಳಾಗಿವೆ. ನದಿ, ಬೆಟ್ಟ-ಗುಡ್ಡ, ಝರಿ, ಕಡಲು, ಮರಗಿಡ, ಹೂವು-ಮುಳ್ಳು, ಭಾನು, ಭೂಮಿ, ಸೂರ್ಯ, ನಕ್ಷತ್ರ, ಋತುಗಳಾದ ಶಿಶಿರ, ಶರದ, ವಸಂತ, ಗ್ರೀಷ್ಮ, ವರ್ಷ- ಎಲ್ಲವೂ ಅವರ ಕಾವ್ಯಕ್ಕೆ ಪ್ರಚೋದನೆಯಾಗಿವೆ. ಪ್ರಕೃತಿಯ ಕ್ರಿಯೆಗಳನ್ನೂ, ಚೇತನಗಳನ್ನೂ

ಪೌರಾಣಿಕ ದೃಷ್ಟಿ, ಸೌಂದರ್ಯ ದೃಷ್ಟಿಯೊಂದಿಗೆ ಗಮನಿಸುತ್ತಾರೆ; ಪ್ರತೀಕಾತ್ಮಕವಾಗಿ ವ್ಯಾಖ್ಯಾನಿಸುತ್ತಾರೆ. ಎಲ್ಲ ಬಗೆಯ ದರ್ಶನ, ದೃಷ್ಟಿಯ ಹಿಂದೆ ಭಕ್ತಿ ಶ್ರದ್ಧೆ, ತಾದಾತ್ಮ್ಯತೆ, ಮೆಚ್ಚುಗೆಯ ಭಾವವಿದೆ. ಯದುಗಿರಿಯ ಮೌನವನ್ನು, ಅನುಭಾವಿಕ ನೆಲೆಯಲ್ಲಿ ವರ್ಣಿಸಬಲ್ಲರು, ಪಡುವಣ ಕಣಿವೆಯ ಮೌನ, ನಿದ್ರಾವಸ್ಥೆಯ ಮೌನ; ಘನ ಮೌನ; ಚಿನ್ಮೌನವೆಂದು, ಸೂರ್ಯೋದಯವನ್ನು ಭೂಮಿಯನ್ನು ಹೊತ್ತು ಕಾಪಾಡಿದ ವರಾಹವೆಂತಲೂ, ಚಿಕಹೂದನಿ 'ಅಹ'ಮೆಂಬ ನಿಧಿನಾಗರವನ್ನು ಥಟ್ಟನೆ ಎರಗಿ ಒಯ್ಯುವ ಗರುಡನೆಂತಲೂ ವರ್ಣಿಸಬಲ್ಲರು. ಹಾಗಾಗಿ ಬಿಡಿ ಕವಿತೆಗಳು ಅವರ ತತ್ವಮಥನಕ್ಕೆ, ದರ್ಶನಕ್ಕೆ ಒದಗಿಬಂದಿರುವಾಗಲೂ ಗೀತನಾಟಕಗಳನ್ನು ಮಾಧ್ಯಮವಾಗಿಸಿಕೊಳ್ಳಲು ಬಲವತ್ತರವಾದ ಒತ್ತಡಗಳಿರುವುದು ಸ್ಪಷ್ಟವಾಗುತ್ತದೆ. ದೇವರು, ದೇಗುಲ ಅದರಲ್ಲಿಯೂ ರಾಮ-ಕೃಷ್ಣರು, ಪ್ರಕೃತಿ, ಮೌಲ್ಯಗಳ ಬಗ್ಗೆ ವಿಸ್ತೃತ ಚಿಂತನೆ ಮಾಡಲು ಈ ಗೀತನಾಟಕ ಪ್ರಕಾರ ಅವರಿಗೆ ಸಮರ್ಥ ಮಾಧ್ಯಮವಾಗಿ ತೋರಿದೆ. ಗದ್ಯ ಬರಹಗಳಲ್ಲಿ ನೇರವಾಗಿ ಹೇಳಿದ ವಿಚಾರಗಳನ್ನೂ ಒಂದು ನಿರ್ದಿಷ್ಟವಸ್ತು, ಪಾತ್ರ, ಸನ್ನಿವೇಶಗಳ ಮೂಲಕವಾಗಿ ಕಲಾತ್ಮಕವಾಗಿ, ರೂಪಕಾತ್ಮಕವಾಗಿ ವ್ಯಂಜಿಸುವ ಪ್ರಯತ್ನ, ಪ್ರಯೋಗಗಳಾಗಿ ಈ ಗೀತನಾಟಕಗಳಿವೆ. ಗೀತನಾಟಕಗಳಲ್ಲಿನ ತಾತ್ವಿಕ ಚಿಂತನೆಗಳ ಅರ್ಥೈಸುವಿಕೆಗೆ, ಗ್ರಹಿಕೆಗೆ ಪೂರ್ಣಭಾವಿಯಾಗಿ, ದೇವರುಗಳ ಬಗ್ಗೆ ಪ್ರಕೃತಿಯ ಬಗ್ಗೆ, ಕಾವ್ಯ ಸೃಷ್ಟಿಯ ಬಗ್ಗೆ, ಪುರೇಣೇತಿಹಾಸಗಳ ಬಗ್ಗೆ, ದೇಗುಲಗಳ ಬಗ್ಗೆ, ಗದ್ಯಲೇಖನಗಳಲ್ಲಿನ ಕೆಲವು ವಿಚಾರಗಳನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

ದೇವರು ಮತ್ತು ಮೌಲ್ಯಗಳು ನಿತ್ಯ ಸೃಷ್ಟವಾಗಬೇಕಾದಂತಹ, ಮೂರ್ತವಾಗಬೇಕಾದಂತಹ, ಅಮೂರ್ತ ಹೃದಯ ಸ್ಪಂದನಗಳು, ಸ್ವಾಂತ ಸ್ಫೂರ್ಜನಗಳು, ಆತ್ಮಾವಿಷ್ಕರಣಗಳು....... ಮನಸ್ಸಿಗೆ ತಂದುಕೊಂಡರೆ ಉಂಟು ಇಲ್ಲದಿದ್ದರೆ ಇಲ್ಲ ಎನ್ನುವ ಪು.ತಿ.ನ. ಅವರು ತಮ್ಮ ವೈಯಕ್ತಿಕ ನೆಲೆಯಿಂದ ನಂಬಿದರು, ವ್ಯಷ್ಠಿ ಪ್ರಜ್ಞೆಯ ಅಂತರ್ಭಾಗವಾಗಿಸಿಕೊಂಡರು. ಅವರಲ್ಲಿಯೂ ದೇವರ ಅಮೂರ್ತತ್ವದ ಅಭಿವ್ಯಕ್ತರೂಪಗಳಲ್ಲಿ 'ಕೃಷ್ಣ' ಅವರ ಹಲವು ದರ್ಶನಗಳ ಸಂಕೇತರೂಪವಾದ. 'ರಾಮ' ರೂಪವೂ ಅವರಿಗೆ

ಪ್ರಿಯವಾದವರೂ, ಹೇರಾಸೆಗಳುಳ್ಳ ಮಹಾಮನುಷ್ಯ, ವಚನ ಪರಿಪಾಲನೆ. ತ್ಯಾಗ, ತಪಸ್ಸು, ಮಾನವೀಯತೆಗಳನ್ನು ಪ್ರತಿನಿಧಿಸುವಂತಹ ಆದರ್ಶಮಾನವ, ಅವನ ಇಡೀ ಚರಿತ್ರೆ, ಆದರ್ಶ ಮಾನವಚರಿತ್ರೆ, ಆದರೆ ಕೃಷ್ಣ ಮಾತ್ರ ಮನುಷ್ಯ ಗ್ರಹಿಕೆಗೆ ಮೀರಿದ ವ್ಯಕ್ತಿತ್ವವುಳ್ಳವನು. ಅವರೇ ಹೇಳುವಂತೆ, "ಶ್ರೀ ಕೃಷ್ಣನನ್ನು ಮನುಷ್ಯನೆಂದು ಭಾವಿಸುವುದು ತುಂಬ ಕಷ್ಟವೆನಿಸುತ್ತದೆ. ಈತ ರಾಮನಷ್ಟು ಸರಳನಲ್ಲ ನಮ್ಮ ನಾಡು ಏರುವೆಯ ದಾರಿಯಲ್ಲಿದ್ದಾಗ ರಾಮ ಜನಿಸಿ ಈ ಏರುವೆಯ ಹಾದಿಯನ್ನು ಹವಗೊಳಿಸಿದ; ಕೃಷ್ಣನ ಅವತಾರ ಈ ನಾಡಿನ ಇಳಿಗಾಲದಲ್ಲಾಯಿತು ರಾಮನಲ್ಲಿ ವೈಷ್ಣವಾಂಶ ಹೆಚ್ಚು, ಕೃಷ್ಣನಲ್ಲಿ ಶಿವಾಂಶ ಅಧಿಕ, ರಾಮ ತಾನೊಬ್ಬ ಮನುಷ್ಯನೆಂಬುದನ್ನು ತಾನೂ ಮರೆಯಲಿಲ್ಲ, ಮಿಕ್ಕವರಿಗೂ ಮರೆಯಗೊಡಲಿಲ್ಲ, ಕೃಷ್ಣನ ರೀತಿಯೇ ಬೇರೆ. ತಾನೊಬ್ಬ ಸಾಮಾನ್ಯ ಮನುಷ್ಯನೆಂದು ಆತನೆಲ್ಲಿಯೂ ಹೇಳಿಕೊಂಡದ್ದು ಕಾಣೆ, ಯಾರೊಬ್ಬರ ಮನಸ್ಸಿಗೂ, ಅವನು ಎಷ್ಟೇ ಸನಿಯದವನಾಗಿರಲಿ, ಶ್ರೀ ಕೃಷ್ಣ ಸಂಪೂರ್ಣವಾಗಿ ಎಟುಕಿದಂತೆ ಕಂಡು ಬರುವುದಿಲ್ಲ" (ದೀಪರೇಖೆ-ಪುಟ -12) ಅನೇಕ ಬಗೆಯ ಕೃಷ್ಣರನ್ನು ಕಾಣುವ ಪು.ತಿ.ನ. ಅವರಿಗೂ ಶ್ರೀ ಕೃಷ್ಣನ ಸಮಗ್ರ ವ್ಯಕ್ತಿತ್ವ ದರ್ಶನ ಸಾಧ್ಯವಾಗಲಿಲ್ಲವೆನಿಸುತ್ತದೆ. ಇವರ ಈ ಚಿಂತನೆ, ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಗೋಕುಲನಿರ್ಗಮನ, ಕೃಷ್ಣ-ಕುಚೇಲ, ಶ್ರೀರಾಮ ಪಟ್ಟಾಭಿಷೇಕ ಗೀತನಾಟಕಗಳಲ್ಲಿ ಚಿತ್ರಿತ ವಾಗಿರುವ ಕೃಷ್ಣ-ರಾಮರ ನಡವಳಿಕೆಗಳನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ. ರಸರೂಪಿ ಕೃಷ್ಣನಾಗಿ ಏಕಕಾಲದಲ್ಲಿ ಸಮಸ್ತ ಜಡಚೇತನಗಳನ್ನೂ ಭವಭೀತಿಯಿಂದ ಬಿಡಿಸಿ ಸಚ್ಚಿದಾನಂದದೆಡೆಗೆ ಒಯ್ಯುವ ಸಮರ್ಥ ಭವಸಂಸ್ಪರ್ಶದೂರನು. ಆದರೆ ರಾಮನು ಹಾಗಲ್ಲ ಮಾನವ ಸಮಾಜದ ಎಲ್ಲ ಕಟ್ಟು ಕಟ್ಟಳೆಗಳಿಗೆ, ರೀತಿ ನೀತಿಗಳಿಗೆ ಬದ್ಧನಾದವನು, ಅವನು ಕೇವಲ ಜನನಾಯಕ; ಪ್ರಜಾನಾಯಕ, ಆದ್ದರಿಂದಲೇ ಅವನ ಹೊಣೆಗಾರಿಕೆ ಹಿರಿದು. ಜನಾಭಿಪ್ರಾಯಕ್ಕೆ ಗೌರವ ಸಲ್ಲಿಸುವುದೇ ಮುಖ್ಯವೆನಿಸಿದಾಗ ಯಾವುದೇ ಸಂಬಂಧಗಳನ್ನು ಮುಖ್ಯವಾಗಿ ಪರಿಗಣಿಸುವುದಿಲ್ಲ. ಮಡದಿಗೆ ಅಗ್ನಿ ಪರೀಕ್ಷೆ ಅನಿವಾರ್ಯ ವಾಗಿಸುತ್ತಾನೆ.

ಅವತಾರದ ಬಗೆಗಿನ ಅವರ ನಿಲುವು ಸಾಂಪ್ರದಾಯಿಕವೇ. ಇಲ್ಲಿಯವರೆಗೂ ನಂಬಿಕೊಡು ಬಂದಂತೆ, "ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ ಧರ್ಮ ಸಂಸ್ಥಾಪನಾರ್ಥಾಯ" -ಎಂದೇ ನಂಬುತ್ತಾರೆ. ಈ ನಂಬಿಕೆಯು 'ರಾಮೋದಯ' 'ದೀಪಲಕ್ಷ್ಮಿ' ಗೀತನಾಟಕಗಳಲ್ಲಿ ನಿಚ್ಚಳವಾಗಿ ಕಾಣುತ್ತದೆ. ಭಗವಂತನ ಉದಯದ ಪೂರ್ವಸಂಧ್ಯೆಯಲ್ಲಿ ಭೂಮಿ ಹದಗೆಟ್ಟದ್ದು ಅವತಾರದ ಅವಧಿಯಲ್ಲಿ ತಿರುಗಿ ಹಸನಾಗುತ್ತದೆ. ಆದರೆ ಅಲ್ಲಿಯವರೆಗೆ ಮನುಷ್ಯದೇಹದಲ್ಲಿ ಉಳಿದು ಬದುಕುವುದು ಭಗವಂತನಿಗೂ ಸುಲಭವಲ್ಲ. ಆದ್ದರಿಂದಲೇ ಅವತಾರ ಸಂಧ್ಯೆಗಳು ಕ್ಲೇಶದಾಯಕವೆನ್ನುವುದು ಅವರ ನಿಲುವು.

ನಾವು ಆಚರಿಸುವ ಹಬ್ಬಗಳೂ ಕೂಡ ಇವರ ಈ ದೈವ ಕಲ್ಪನೆಯ ಜೊತೆಗೇ ನಂಟು ಹೊಂದಿವೆ. ಅಮೂರ್ತದೇವರ ಮೂರ್ತ ಅಭಿವ್ಯಕ್ತಿ ಈ ಧಾರ್ಮಿಕ ಸಾಂಸ್ಕೃತಿಕ ಆಚರಣೆಗಳಲ್ಲಿದೆ. ಅಲ್ಲದೆ ದೇವರ ತಾಣವಾದ ದೇಗುಲಗಳೂ ಕೂಡಾ ಒಂದು ರೀತಿಯಲ್ಲಿ ಆಧ್ಯಾತ್ಮಿಕ, ಪಾರಮಾರ್ಥಿಕಗಳ ಪ್ರತೀಕ....... ವಾಸ್ತವ ಪ್ರಪಂಚದ ಅಶಾಂತಿಗೆ ಇಲ್ಲಿ ಮದ್ದು ಒದಗುವುದು....... ಜೀವನದ ಬೆಲೆಗಳಿಗೆ ಅಳವಡದ ಯೋಗಾನಂದದಿಂದ ಸಾಂದ್ರವಾದ ತಾಣವಾಗಿದೆ......... ರಮ್ಯತೆ, ಸುಖಗಳ ಮೂಲಸ್ಥಾನ ಎಂದೆಲ್ಲ ಭಾವಿಸುತ್ತಾರೆ. ಒಂದು ರೀತಿಯಲ್ಲಿ ಪು.ತಿ.ನ. ಅವರಿಗೆ ದೇವರು, ಪ್ರಕೃತಿಗಳು ಅನನ್ಯ ತತ್ವಗಳು. ದೇವರ ಚೆಲುವಿನ ಅಭಿವ್ಯಕ್ತ ರೂಪವೇ ಪ್ರಕೃತಿ, ದೈವಾರಾಧನೆ ಪ್ರಕೃತಿ ಯಾರಾಧನೆಯ ಮನಃ ಸ್ಥಿತಿಯೇ ಅವರ ಕಾವ್ಯ, ನಾಟಕಗಳಲ್ಲಿ ಸ್ಥಾಯಿಯಾಗಿ ಕಂಡು ಬರುತ್ತದೆ. ಈ ಎರಡರಲ್ಲಿ ನೆಲೆಗೊಂಡ ಮನಸ್ಸಿಗೆ ಸುಖ, ಸಂತೋಷ, ರಸಾನುಭೂತಿ, ದಿವ್ಯಾನುಭವಗಳು ತಪ್ಪದೆ ಲಭಿಸುತ್ತವೆಂಬುದು ಅವರ ದೃಢವಾದ ಅಭಿಪ್ರಾಯ; ನಂಬಿಕೆ.

ಮತ್ತೊಂದು ಅವರು ಮೆಚ್ಚುವ ಗುಣವೆಂದರೆ ಮಾನವೀಯತೆ. ಮಾನವ ಸೇವೆಗಳು ಮನುಷ್ಯನನ್ನು ಎತ್ತರದ ಸ್ತರಕ್ಕೇರಿಸುತ್ತದೆ. ಆದರೆ ಎಷ್ಟೋವೇಳೆ ನಮ್ಮ ಪ್ರೀತಿಯ ನಂಟುಗಳು, ರಕ್ತ ಸಂಬಂಧಗಳು ನಮ್ಮ ಮಾನವೀಯತೆಯ ಕೊರಳು ಹಿಚುಕುತ್ತದೆ. ಸ್ವಾರ್ಥ. ಆಮಿಷಗಳು ಅಡ್ಡ ಬರುತ್ತವೆ. ಇಂತಹ ಪರಿಸ್ಥಿತಿಯಲ್ಲಿ 'ರಮಣ ಮಹರ್ಷಿ'ಯಂಥ ವ್ಯಕ್ತಿಗಳು

ಮೌಲ್ಯಗಳ, ತತ್ವಗಳ ಸಾಕ್ಷಾತ್ಕಾರ ಸ್ವರೂಪರಂತೆ ಕಾಣುತ್ತಾರೆ. 1989 ರಲ್ಲಿ ರಚಿಸಿದ 'ರಮಣ ಪ್ರಭಾ' ಗೀತನಾಟಕ, ತಾವು ಪ್ರೀತಿಸುವ ಮೌಲ್ಯಗಳಿಗೆ, ತತ್ವಗಳಿಗೆ ಸಲ್ಲಿಸುವ ಗೌರವದ ದ್ಯೋತಕವಾಗಿ, ರಮಣ ಮಹರ್ಷಿಯ ಸಮಗ್ರ, ಉದಾತ್ತ ವ್ಯಕ್ತಿತ್ವವನ್ನು ಅದ್ಭುತವಾಗಿ ಈ ಗೀತನಾಟಕದಲ್ಲಿ ನಿರೂಪಿಸಿದ್ದಾರೆ. ರಮಣಮಹರ್ಷಿಗಳು ಅಧ್ಯಾತ್ಮ ಅನುಭಾವಗಳನ್ನು ತಮ್ಮ ಬದುಕಿನಲ್ಲಿ ರೂಢಿಸಿಕೊಂಡಿರುವುದರ ಜೊತೆಗೆ, ಅದಕ್ಕೂಮಿಗಿಲಾದ ಮಾನವೀಯತೆ, ಸೇವಾ ಮನೋಭಾವ, ಸಕಲ ಜೀವರಾಶಿಗಳ ಬಗ್ಗೆ ತಳೆದ ವಾತ್ಸಲ್ಯ ಪ್ರೀತಿಗಳು ಅವರನ್ನು ಅತಿಮಾನವತೆಯೆತ್ತರಕ್ಕೆ ಏರಿಸಿದೆ. ಪು.ತಿ.ನ. ಅವರು ನಂಬಿದ ಎಲ್ಲ ಮಾನವೀಯ ಮೌಲ್ಯಗಳಿಗೊಡ್ಡಿದ ರೂಪಕದಂತಿರುವ ರಮಣರು ಸಾಕ್ಷಾತ್ ಶಿವಸ್ವರೂಪಿಯಾಗಿ ಕಾಣಿಸುವುದೇ ಅಲ್ಲದೆ ಅವರ ಆಸ್ತಿಕಮನಸ್ಸು ಸಂಪೂರ್ಣ ವಶವರ್ತಿಯಾಗಿ ಭಕ್ತಿಭಾವ, ತಾದ್ಮಾತ್ಯತೆಗಳಿಂದ, ಪರವಶತೆಯಿಂದ ಮಹೋನ್ನತವಾಗಿ ಚಿತ್ರಿಸಿದ್ದಾರೆ. ರಮಣ ಮಹರ್ಷಿಯ ಲೌಕಿಕ ವಿಮುಖತೆ, ಆಧ್ಯಾತ್ಮಿಕ ಅನುಸಂಧಾನ, ಸಾಧನೆ, ಅಂತಸ್ಸತ್ವ ದಾರ್ಶನಿಕ ದೃಷ್ಟಿ ಪವಾಡ ಸದೃಶ ವ್ಯಕ್ತಿತ್ವ "ಮಾನವರೊಳು ಲೋಕೋತ್ತರ ಪುರುಷ" ಎಂಬಂತೆ ಕಾಣಿಸುತ್ತದೆ. ಆ ಯೋಗಿಯ ದಿವ್ಯ ವ್ಯಕ್ತಿತ್ವವನ್ನು ಕವಿ ರೂಪಕಕಾರ ಪು.ತಿ.ನ. ಕಟ್ಟಿ ಕೊಟ್ಟಿರುವ ಪರಿ ಸರಳವೆನಿಸಿದರೂ ದಿವ್ಯವೂ ಉಜ್ವಲವೂ ಆಗಿದೆ.

ಬಟ್ಟೆಗಳೆದು ಬಯಲನುಟ್ಟು
ಕೊಟ್ಟುದುಂಡು ಬೆಟ್ಟವಲೆದು
ಇಷ್ಟರಿಂದ ದೂರ ಸರಿದು

-(ಸ. ನೇ. ನಾ. ಪು - 724)

ನಿಂತ ವ್ಯಕ್ತಿ,

"ಶಂಕರನ ಶಂಕರನ ಸಾಲಿನೊಳು ಬಂದೀ ಮಹರ್ಷಿ ಶಂಕರನೆ ತಾನಾದನೀ ಸಾರದರ್ಶಿ"

- ಎಂದು ಹೃದಯ ತುಂಬಿ ಕೊಂಡಾಡುತ್ತಾರೆ.

ಸಹಜ ಶಿವಯೋಗಿ, ಶುದ್ಧಾತ್ಮನಾದ ರಮಣಮಹರ್ಷಿ ಅಧ್ಯಾತ್ಮಯೋಗ ಸಾಧನೆಗೆ ಹೊಸ ವ್ಯಾಖ್ಯಾನ ನೀಡಿದ ಜನದೂರನಾಗುವ

ಬದಲು ಬುದ್ಧನಂತೆ ಜನಸಂಮುಖನಾಗಿ ಸಾಮಾಜಿಕ ಕಾರ್ಯಗಳಲ್ಲಿ, ಪರೋಪಕಾರ, ಸೇವಾ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡ, ಎದೆಯೊಳಗೆ ಅಖಂಡ, ಅಪಾರ ಪ್ರೀತಿಯನ್ನು ತುಂಬಿಕೊಂಡು ಸಕಲ ಜೀವರಾಶಿಗಳಿಗೆ ಆ ಪ್ರೀತಿಯನ್ನು ಹಂಚಿಕೊಟ್ಟ, ಉಪದೇಶದ ಹಂಬಲವಾಗಲೀ, ಉಪಕಾರದ ಹಂಬಲವಾಗಲೀ ಇರಿಸಿಕೊಳ್ಳದೆ ಅಡಿಗೆ ಕೆಲಸ, ಶಾಕಗಳ ಅಣಿಗೈವ, ಗುಡಿಸುವ, ಊಟದೆಲೆ ಹಚ್ಚುವ ಮುಸುರೆ ತೊಳೆವ, ಎಂಜಲೆಲೆ ಎತ್ತುವ ಎಲ್ಲ ಬಗೆಯ ಕೆಲಸಗಳಲ್ಲಿ ಯಾವುದೇ ಸಂಕೋಚ, ಮುಜುಗರಗಳಿಲ್ಲದೆ, ಶ್ರಮ, ಸೇವೆಗಳನ್ನೇ ದೇವರೆಂದು ಭಾವಿಸಿ ನಡೆದವನು; ಜನಸೇವೆ ಜನಾರ್ದನ ಸೇವೆ, 'ಕಾಯಕವೇ ಕೈಲಾಸ'ಎಂಬ ಉದಾತ್ತ ಪರಂಪರೆಯ ಅರಿವನ್ನು ಹಿಂದಿರಿಸಿಕೊಂಡಿದ್ದ ಪು.ತಿ.ನ. ಅವರಿಗೆ ಇಂತಹ ಕೆಲಸಗಳನ್ನೇ ತನ್ನ ಅಧ್ಯಾತ್ಮ ಬದುಕಿನ ಭಾಗವೆಂದು ಭಾವಿಸಿದ ರಮಣ ಮಹರ್ಷಿಗಳು "ಓದುವ ಬಾಧೆಗೆ ಈಡಾಗದೆಯೇ, ಬೋಧಿ ಪಡೆದ ಮಹಾತ್ಮನಿವ" ಎನಿಸಿದ್ದು ಆಶ್ಚರ್ಯವಲ್ಲ. ಆ ವ್ಯಕ್ತಿತ್ವಕ್ಕೆ, ಮೌಲ್ಯಗಳ, ಮಾನವೀಯತೆಯ ಪ್ರತೀಕಕ್ಕೆ ಎಷ್ಟು ಬಗೆಯಲ್ಲಿ ಭಕ್ತಿ ಗೌರವಗಳನ್ನು ಸೂಚಿಸಿದರೂ ತಣಿಯದ ಮನಸ್ಸು ಮತ್ತೆ ಮತ್ತೆ "ಲಜ್ಜೆಗಳೆದ ಭವದೊಜ್ಜೆನೀಗಿದ........ ಅಜ್ಞತೆಯುಳಿದಿರುವಾತ್ಮನಾಗಿ ಭವ ನಿಮಜ್ಜನನಾಗಿ ಬಾಳಿದ ಯೋಗಿ" ಎಂದು ಬಣ್ಣಿಸುತ್ತಾರೆ.

ಇಲ್ಲಿ ವ್ಯಕ್ತಿ ಕೇಂದ್ರವಾದರೂ ಪು.ತಿ.ನ. ಅವರ ತತ್ವ ಜಿಜ್ಞಾಸೆಗೆ ಉತ್ತರ ದೊರೆತಿದೆ. ಮಹರ್ಷಿಯಂತಹ ಈ ವ್ಯಕ್ತಿಯಲ್ಲಿ ದೈವಾಂಶ, ಒಲುಮೆ ಪ್ರೀತಿಗಳು, ಸತ್ಯ ಶೌಚಗಳು, ಅಂತಃ ಸೌಂದರ್ಯ ನೆಲೆಗೊಂಡಿರುವುದನ್ನು ಅಂತರ್ದೃಷ್ಟಿಯಿಂದ ಗ್ರಹಿಸುತ್ತಾರೆ. ಮಹರ್ಷಿಯ ಆತ್ಮ ಸೌಂದರ್ಯದ ಸಾಕ್ಷಾತ್ಕಾರವನ್ನು ಪು.ತಿ.ನ. ಸಾಧ್ಯ ವಾಗಿಸಿಕೊಂಡಿರುವುದೇ ಅವರ ಮೇಲಿನ ಗೀತನಾಟಕ ರಚನೆಗೆ ಪ್ರಬಲವಾದ ಪ್ರೇರಣೆಯಾಗಿದೆ.

ತೀರಾ ಸಾಮಾನ್ಯರಾದವರನ್ನೂ, ಕೆಡುಕರನ್ನು ಸಮಾಜ ನೀಚವಾಗಿ ಕಾಣುವ ವರ್ಗದವರನ್ನೂ ಕೂಡ ಉದಾತ್ತ ಮನಸ್ಸಿನಿಂದ ಕಾಣುತ್ತಾರೆ. ಅವರ ದೋಷಗಳನ್ನು, ದೌರ್ಬಲ್ಯಗಳನ್ನು, ಬಾಹ್ಯದ ಅಸುಂದರತೆ, ವಿಕಾರಗಳನ್ನೂ ನಿರ್ಲಕ್ಷಿಸಿ ಅಂತಃ ಸೌಂದರ್ಯ ಮತ್ತು

ಅವರಲ್ಲಿ ನಿಕ್ಷಿಪ್ತವಾದ ಗುಣಗಳನ್ನು ಮಾತ್ರವೇ ಗ್ರಹಿಸುವ ಮನಸ್ಸಿಗೆ ಹುಟ್ಟಿನಿಂದ ಯಾರೂ ಕೀಳಲ್ಲ, ಕೆಟ್ಟವರಲ್ಲ ಎನ್ನುವುದೇ ನಂಬಿಕೆಯಾಗಿದೆ. ಅದರಲ್ಲಿಯೂ ಕವಿಯಾದವನ ದೃಷ್ಟಿ ಧೋರಣೆಗಳೇ ವಿಶಿಷ್ಟ, ವಿಭಿನ್ನ. ಅವರಿಗಂತು ಕವಿ, ಭವಸಮುದ್ರಮಥಿಸಿ ಭಾವಗಳನ್ನು ಪಡೆಯುವಂಥ ಕಸುಬುದಾರ; ಜಗನ್ಮೋಹಕ ಕಲೆಯಲ್ಲಿ ನಿರಂತರಾಸಕ್ತ; ಸೌಂದರ್ಯ ಪ್ರಸಾರಕ; ನಿರುಪಾಧಿಕ ಸೌಂದರ್ಯಾನುಭೂತಿಯನ್ನು ತನ್ನ ಕಾವ್ಯದ ಮೂಲಕ ಲೋಗರಿಗೆ ದಕ್ಕಿಸಿಕೊಡುವಂಥವನು. ವಿಟ, ವೇಶ್ಯೆ, ಜೂಜಾಳಿ, ಕಳ್ಳ, ಲಂಪಟ ಮೊದಲಾದವರೂ ಕೂಡಾ ಭವಲೋಕದಲ್ಲಿ ತಿರಸ್ಕೃತರು, ನಿಕೃಷ್ಟರಾದರೂ ಭಾವಲೋಕದಲ್ಲಿ ದಿವ್ಯ ಸ್ಥಲ ಘಟಿತರು ಎಂದು ನಂಬುವ ಕವಿಮನದ ಪು.ತಿ.ನ. ಅವರಿಗೆ ರಮಣ ಮಹರ್ಷಿಗಳ ದಿವ್ಯ ವ್ಯಕ್ತಿತ್ವ ಮಹಾನ್ ಎನಿಸಿದ್ದು, ಶಿವಸ್ವರೂಪಿಯಾದ್ದು ಎಂದು ಭಾವಿಸಿದ್ದು ಸಹಜವೇ.

ಇದೇ ರೀತಿಯಲ್ಲಿ **1993** ರಲ್ಲಿ, ಕಾಳಿದಾಸ ರಚಿಸಿದ ವಿಕ್ರಮೋರ್ವಶೀಯಂ ನಾಟಕದಲ್ಲಿ ಬರುವ ಪುರೂರವನ ವ್ಯಕ್ತಿತ್ವಕ್ಕೆ ಮಾರುಹೋಗಿ ಹೊಸ ವ್ಯಾಖ್ಯಾನದೊಂದಿಗೆ 'ಊರ್ವಶೀ ಪ್ರಣಯಾವ ಲೋಕನ'ಎಂಬ ಗೀತನಾಟಕವನ್ನು ರಚಿಸಿದ್ದಾರೆ. ಕತೆ ಹಳೆಯದೇ ಆದರೂ, ಕಾಳಿದಾಸನ ಕೃತಿಯೇ ಪ್ರೇರಣೇಯಾದರೂ ನಾಟಕದ ಪೂರ್ಣ ಪಠ್ಯವನ್ನು ನಾಟಕವಾಗಿಸಲಿಲ್ಲ. 'ಅಹಲ್ಯೆ' ನಾಟಕದಲ್ಲಿ ಕಾಣುವ ಸಂಸಾರ, ದಾಂಪತ್ಯ ಪಾತಿವ್ರತ್ಯ ಇತ್ಯಾದಿ ಮೌಲ್ಯಗಳ ಚಿಂತನೆ ನಡೆಯುವುದಿಲ್ಲ; ಊರ್ವಶಿಯ ಅದ್ಭುತ ಸೌಂದರ್ಯ, ಪುರೂರವ, ಊರ್ವಶಿಯರ ನಡುವಿನ ಪ್ರೇಮಾಂಕುರ, ಸಂಗತಿಗಳನ್ನು ಹೇಳುವುದು, ಊರ್ವಶಿಯ ಮಾನವ ನೊಂದಿಗಿನ ಪ್ರಣಯ ಅಥವಾ ಪ್ರೇಮ ಸಂಬಂಧಕ್ಕೆ, ಸೆಳೆತಕ್ಕೆ ಒಂದು ಸಣ್ಣ ತರ್ಕವನ್ನು ಹೇಳುವುದು ಮಾತ್ರವೇ ಮುಖ್ಯವಾಗಿದೆ. ಮನುಷ್ಯ ಲೋಕದ ನಾರಾಯಣ ಋಷಿಯಿಂದ ಹುಟ್ಟು ಪಡೆದವಳ್ದರಿಂದ ಊರ್ವಶಿಯಲ್ಲಿ ಮಾನವಾಂಶ ಅಲ್ಪ ಪ್ರಮಾಣದಲ್ಲಿದೆ. ಅಲ್ಲದೆ ಪು.ತಿ.ನ.ರಿಗೆ ಊರ್ವಶಿ - ಪುರೂರವರಿಬ್ಬರೂ ಅವರವರ ಸೌಂದರ್ಯ, ಗುಣಗಳಿಂದಾಗಿ ಶ್ರೇಷ್ಠರೆನಿಸಿದ್ದಾರೆ. ಪುರೂರವನಂತಹ ಮಾನವ ಶ್ರೇಷ್ಠರನ್ನು ದೈವಸ್ತ್ರೀ ಯೊಬ್ಬಳು ಪ್ರೇಮಿಸುವುದು ಅಪೂರ್ವವೆನಿಸಿದೆ. ಪು.ತಿ.ನ. ಅವರಿಗೆ ಈ

ಪ್ರಣಯ ಸಂಬಂಧದ ಬಗ್ಗೆ ಗಾಢವಾಗಿ ಆಲೋಚಿಸುವುದು ಅನಿವಾರ್ಯವಾಯಿತು. ಪುರೂರವ ಯಃಕಶ್ಚಿತ್ ಕಾಮಿಯಲ್ಲ ಸಂಯಮಿ. ಆದರೂ ಊರ್ವಶಿಯನ್ನು ಪ್ರೀತಿಸಿದ್ದು ಅವನನ್ನು ದಿವ್ಯಕಾಮಿಯನ್ನಾಗಿಸಿತು. ಇಬ್ಬರ ಸಂಮಿಲನ ಕಾಮ, ಪ್ರೇಮ ಶುದ್ಧಿಗೆ ದಾರಿಯಾಗಿ ಸ್ವರ್ಗದಲ್ಲಿ ಚಿರಸಂಯೋಗದೊಂದಿಗೆ ಇರುತ್ತಾರೆ.

ಪು.ತಿ.ನ. ಅವರಿಗೆ ಮನುಷ್ಯನಲ್ಲಿ ಯಾವುದೋ ಒಂದು ಉತ್ತಮ ಗುಣ .ಕಂಡು ಬಂದರೆ, ಭಾವುಕವಾಗಿ ಆ ವ್ಯಕ್ತಿಯನ್ನೇ ತಮ್ಮ ಚಿಂತನೆಯ ಪರಿಧಿಗೆ ಒಳಗಾಗಿಸುತ್ತಾರೆ. ಅವರ ದೃಷ್ಟಿಯಲ್ಲಿ ಕವಿ ಲೋಕಮಿತ್ರ. ಬ್ರಹ್ಮ ಸಂವೇದನೆಯುಳ್ಳವನು. ಜಗತ್ತಿನ ಸಮಸ್ತ ವಸ್ತುಗಳಲ್ಲೂ, ರಸ ಪ್ರಜ್ಞೆಯ ಸ್ಥಿತಿಯಲ್ಲಿ ತಾದಾತ್ಮ್ಯತೆ, ತಲ್ಲೀನತೆಗಳನ್ನು ಸಾಧ್ಯವಾಗಿಸಿಕೊಳ್ಳುವವನು. ಇಂತಹ ರಸಪ್ರಜ್ಞೆ ಸ್ಥಿತಿಯಲ್ಲಿ ಸೌಂದರ್ಯ ಬೋಧೆ, ಸೌಂದರ್ಯದಿಂದ ಪ್ರೀತಿ, ಪ್ರೀತಿಯಿಂದ ಗುಣಗ್ರಹಣ, ಈ ಗುಣಗಳ ಉಚಿತ ಸಂಯೋಜನೆಯಿಂದ ಸಮವಾಯಸಿದ್ಧಿ -ಎಂದು ನಂಬಿದಂತೆ ಬದುಕಿದರು.

'ಕವಿ' ತತ್ವದ ಬಗ್ಗೆ ಅತಿಯಾದ ನಿಷ್ಠೆ, ಕವಿಸೃಷ್ಟಿಯ ಬಗ್ಗೆ ಅಪಾರ ಹೆಮ್ಮೆ, 'ಕವಿ' ತನದಲ್ಲೇ ಉಸಿರಾಡುವ ಮನಸ್ಸು. ಹೀಗಾಗಿ, ಶೈಲಿ, ಸಂವಿಧಾನಗಳ ದೃಷ್ಟಿಯಿಂದ ಅವರ ರಚನೆಗಳು ಹೇಗೇ ಭಿನ್ನವಾಗಿರಲಿ, ಅಭಿವ್ಯಕ್ತಿಸುವ ವಿಚಾರಗಳು ಸಾಂಪ್ರಾದಾಯಿಕತೆಯ ಸೊಗಡಿನಿಂದ, ಪರಂಪರೆಯ ನಿಷ್ಠೆಯ ಪಾಕದಿಂದ ಕೂಡಿರುತ್ತವೆ. ಅಭಿವ್ಯಕ್ತಿಗೆ ಕಲಾ ಸ್ಪರ್ಶ, ರಸಸ್ಪರ್ಶಗಳನ್ನು ನೀಡುವುದರಲ್ಲಿಯೇ ಸಮಾಧಾನ, ಸಂತೃಪ್ತಿಗಳನ್ನು ಅನುಭವಿಸುತ್ತಾರೆ. ಅವರು ಬರೆಯುವ ಕವಿತೆಗಳಾಗಲೀ, ಗೀತ ರೂಪಕಗಳಾಗಲೀ, ಅವುಗಳ ಹಿಂದೆ ವಸ್ತು, ರೂಪ, ಶೈಲಿ, ಸಂವಿಧಾನ ಮುಂತಾದವುಗಳ ಸಮರ್ಪಕ ಸಂಯೋಜನೆ, ಕೃತಿಗಳ ಸಮಗ್ರತೆಯ ಬಗ್ಗೆ ಚಿಂತನೆ ನಡೆಸಿರುತ್ತಾರೆ. ವಸ್ತು,ಸಂವಿಧಾನ ರೂಪ, ಶೈಲಿಗಳಲ್ಲಿ-ಕಾವ್ಯದ ಜೀವಾಳವಿರುವುದಾದರೂ ಎಲ್ಲಿ ? ಎಂದು ಪ್ರಶ್ನಿಸಿಕೊಳ್ಳುತ್ತಲೇ ಉತ್ತರದ ಅನುಸಂಧಾನ ಆರಂಭಗೊಂಡಿರುತ್ತದೆ. ಭವದ ತೀವ್ರ ಸಂವೇದನಾ ರೂಪದ ಪ್ರಜ್ಞೆ (ಭವ ನಿಮಜ್ಜನ ಚಾತುರ್ಯ) ಮತ್ತು ಆ ನಿಮಗ್ನತೆಯಿಂದ ಪಾರಾಗಿ ಬೇರೆಯಾಗಿ ನಿಲ್ಲುವ ಲಘಿಮಾ ಕೌಶಲ

-ಎಂಬ ಕ್ರಿಯೆಗಳಲ್ಲಿ ಕಾವ್ಯದ ಜೀವಾಳವನ್ನು ಗುರುತಿಸಿಕೊಳ್ಳುತ್ತಾರೆ.

ಅವರ ಪ್ರಕಾರ ಕಾವ್ಯ ವಿರುವುದು ತಿಳುವಳಿಕೆ ನೀಡುವುದಕ್ಕಲ್ಲ, ನೀಡುವುದು ಕವಿಯ ಕೆಲಸವೂ ಅಲ್ಲ, ತಿಳಿವನ್ನು ಮೂಲದ್ರವ್ಯವನ್ನಾಗಿ ಮಾಡಿಕೊಂಡು ಅದನ್ನು ತಕ್ಕ ಪಾತ್ರ ಪ್ರಸಂಗಗಳಿಂದ ಕರಣಗ್ರಾಹ್ಯ ವಾಗುವಂತೆ ಮಾಡಿ ಸಂವೇದನಾರೂಪಕ್ಕೆ ಪರಿವರ್ತಿಸಿ ಸಹೃದಯನಿಗೆ ಪ್ರೇಕ್ಷಕನಿಗೆ ತೋರ್ಪಡಿಸುವುದು, ಇದು ಅವನ ಕಾರ್ಯ ಕ್ಷೇತ್ರ (ಸ. ಗೇ. ನಾ. ದೋ. ಬಿ. ಕವಿ ಪು 793)

-ಅವರು ಬರೆದ ಗೀತರೂಪಕಗಳ ಹುಟ್ಟಿನ ಗುಟ್ಟು ಈ ಮಾತುಗಳಲ್ಲಿದೆ. ತಾತ್ವಿಕ ಚಿಂತನೆಗಳು ಅವರ ಬರಹದ ಅವಿಚ್ಛಿನ್ನ, ಪ್ರತ್ಯೇಕಿಸಲಾಗದ ಭಾಗವಾದರೂ, ಅವರು ಅವುಗಳ ಸಂವಹನಕ್ಕೆ ತಮ್ಮದೇ ಆದ ರೀತಿಗಳನ್ನು, ವಿಧಾನಗಳನ್ನು ಅಥವಾ ಆಕಾರಗಳನ್ನು ಪ್ರಯೋಗಾತ್ಮಕ ನೆಲೆಯಿಂದ ಕಂಡು ಕೊಂಡರು.

ಈಗಾಗಲೇ ನವೋದಯ ಪರಂಪರೆಯೊಂದು ಸಿದ್ಧಗೊಳಿಸಿ ಕೊಟ್ಟಿದ್ದ ವ್ಯಕ್ತಿ ನಿಷ್ಠ, ಭಾವಗೀತ ಪ್ರಕಾರವಿದ್ದರೂ, ಅದಕ್ಕೆ ಅದರದೇ ಆದ ಮಿತಿಗಳಿವೆ. ನವೋದಯ ಕಾವ್ಯದ ವಸ್ತು ಸಾಮಗ್ರಿಯೆಲ್ಲವನ್ನೂ ಸೂರೆಮಾಡಿದ್ದಾರೆ. ಹೀಗಿದ್ದರೂ ಗೀತರೂಪಕ ಪ್ರಕಾರ, ಅವರಿಗೆ ಅತಿ ಪ್ರಿಯವಾಗಿದ್ದ ಸಂಗೀತದ ಆಯಾಮವನ್ನೂ ಹೊಂದಿಸಿಕೊಳ್ಳಲು ಒದಗಿ ಬಂದದ್ದು ಮತ್ತು ಕೇವಲ ಒಂದು ಕವಿತೆಯಲ್ಲಿ ಹೇಳಲಾಗದ ಹಲವು ವಿಚಾರಗಳನ್ನು ಒಂದೇ ಭಿತ್ತಿಯಲ್ಲಿ ಬಿಂಬಿಸಲು ಸಾಧ್ಯತೆಯಿದ್ದದ್ದು, ಈ ಪ್ರಕಾರದ ಆಯ್ಕೆಗೆ ಪ್ರಮುಖ ಕಾರಣವಾಯಿತು, ಕಾವ್ಯಾಂಶ ಚಿಂತನಾಂಶ ಅಥವಾ ಬುದ್ಧಿ, ಭಾವಗಳ ಸಮರ್ಥ ಸಮನ್ವಯಕ್ಕೆ, ಸಂವಹನಕ್ಕೆ ಆಪ್ತವಾದ ಕಲಾಪ್ರಕಾರವೆನಿಸಿದ್ದೂ ಮತ್ತೊಂದು ಕಾರಣವಾಯಿತು. ಸಂಗೀತದ ನಿಬಿಡತೆಯಿಂದ ಅದರಲ್ಲಿನ ವೈಚಾರಿಕತೆ, ತಾತ್ವಿಕತೆಗಳು ಕಳೆದು ಹೋಗುವುದೆಂಬ ಭೀತಿಗೆ ಕಾರಣವೇ ಇಲ್ಲದಂತೆ ನಿರ್ವಹಿಸಿದರು. ಅವರ ಸಮಗ್ರ ಗೀತನಾಟಕಗಳ ಸೂಕ್ಷ್ಮ ಅವಲೋಕನದಿಂದ ಅವರ ಚಿಂತನಶೀಲವ್ಯಕ್ತಿತ್ವ ಮತ್ತು ಕಲಾ ಜಿಜ್ಞಾಸೆಯ ನೆಲೆಗಳನ್ನು ನಿಚ್ಚಳವಾಗಿ ಗುರುತಿಸಲು ಸಾಧ್ಯವಾಗುತ್ತದೆ.

ಅವರನ್ನು ಸಾಮಾನ್ಯವಾಗಿ ಸಂಪ್ರದಾಯಶೀಲ ಕವಿಯೆಂದೇ ಭಾವಿಸಲಾಗಿದೆ. ಆದರೆ ಆಧುನಿಕತೆ ಪ್ರಗತಿ ಶೀಲತೆಗಳೆಂದೂ ಅವರ ಸಂಪ್ರದಾಯಶೀಲ ವ್ಯಕ್ತಿತ್ವಕ್ಕೆ ಬಾಧಕವಾಗಲಿಲ್ಲ. ತಮ್ಮ ಸಾಂಪ್ರದಾಯಿಕ ನಂಬಿಕೆಗಳನ್ನೇ, ಅವುಗಳ ಮಿತಿಯೊಳಗೇ ಹೆಚ್ಚು ಹೆಚ್ಚಿಗೆ ಕಲಾತ್ಮಕವಾಗಿಸಲು, ಅರ್ಥವತ್ತಾಗಿಸಲು ಪ್ರಯತ್ನಿಸಿದರು. ಆದಕ್ಕೆಂದೇ ಅವರ ಗೀತನಾಟಕಗಳಲ್ಲಿ ಹೊಸವಿಚಾರಗಳ, ತತ್ವಗಳ ಅನುಸಂಧಾನಕ್ಕೆ ಪ್ರಾಚೀನ ಧರ್ಮ, ಸಂಸ್ಕೃತಿಗಳ ದ್ಯೋತಕಗಳಾದ ರಾಮಾಯಣ, ಮಹಾಭಾರತ, ಪುರಾಣ ಕಾವ್ಯಗಳ ವಸ್ತುವನ್ನೇ ಆಯ್ದು ಕೊಂಡರು. ಅವರಿಗೆ ಇವುಗಳಲ್ಲಿ ಕಂಡು ಬರುವ ಜೀವನದರ್ಶನ, ಅರ್ಥಮೌಲ್ಯಗಳು ಸಾರ್ವಕಾಲಿಕ ಮೌಲ್ಯಗಳಾಗಿ ಕಂಡು ಬಂದವು, ಅಲ್ಲದೆ ಇಲ್ಲಿನ ವಸ್ತುಗಳಲ್ಲಿ ಫ್ಲೆಕ್ಸಿಬಿಲಿಟಿ, ವ್ಯಕ್ತಿ ನಿರಪೇಕ್ಷತೆಯಿರುವುದರಿಂದ ಯಾವುದೇಕಾಲದ ಮೌಲ್ಯ ಪ್ರತಿಪಾದನೆಗೆ ಹೊಂದಿಸಿಕೊಳ್ಳುವ ಸಾಧ್ಯತೆಗಳನ್ನು ಗುರುತಿಸಿದರು. ಪುರಾಣವಸ್ತುವಿಗೆ ಕಾಲದಂತರ ಹೆಚ್ಚಾಗಿರುವುದರಿಂದ ಕಲಾತ್ಮಕವಾಗಿ ಕಾಣುವುದರೊಂದಿಗೆ ಫ್ಯಾಂಟಸಿ ಸೃಷ್ಟಿಸುತ್ತದೆ ಮತ್ತು ಫ್ಯಾಂಟಸಿ ಮೂಲದಲ್ಲಿರುವ ವಾಸ್ತವಾನು ಭೂತಿಗಳನ್ನು ಸಮರ್ಥವಾಗಿ ಬಿಂಬಿಸುವ ಶಕ್ತಿಯಿರುತ್ತದೆ. ಲೌಕಿಕ ಭಾವನೆಗಳನ್ನು ಕೆರಳಿಸದೆ, ಪ್ರೇಕ್ಷಕ ಸಹೃದಯರ ಹೃದಯ ಪರಿಷ್ಕರಣ, ಆತ್ಮವಿಕಸನ, ಭಾವ ವಿಕಸನಗಳನ್ನು ಸಾಧಿಸಿಕೊಡಬಲ್ಲಂಥದೇ ನಿಜವಾದ ಕಲೆಯೆಂದು ನಂಬಿದ ಪು.ತಿ.ನ.ರಿಗೆ ಈ ಗೀತರೂಪಕ ಪ್ರಕಾರ, ತತ್ವ ನಂಬಿಕೆಗಳ ಬದ್ಧತೆಗೆ ಅತ್ಯಂತ ಸಮುಚಿತ ಮಾಧ್ಯಮವೆನಿಸಿತು. ಅವರು ನೀಡಿದ ಒಂದು ಸಂದರ್ಶನದಲ್ಲಿ "ರಂಗದಲ್ಲಿ ಪ್ರಯುಕ್ತವಾದ ಕಾವ್ಯ ಮನ ಮುಟ್ಟಬೇಕಾದರೆ ಅದು ಥಟ್ಟನೆ ನಮಗರ್ಥವಾಗಬೇಕು, ಭಾವ ಹೊಳೆಯಬೇಕು. ಆಲೋಚನೆಗೆ ಅವಕಾಶ ಕಡಿಮೆ, ಪುಂಖಾನು ಪುಂಖವಾಗಿ ಭಾವಗಳು ಒಂದು ಇನ್ನೊಂದನ್ನು ಸೆಳೆಯಿಸುತ್ತಾ ಸಾಗಬೇಕು (ವರ್ಡ್ಸ್‌ವರ್ತ್‌ನ Sponutaneous overflow of emotions ಎಂಬುದನ್ನು ನೆನಪಿಸಿಕೊಳ್ಳಬಹುದು) ಎಲ್ಲವೂ ಕೊನೆಯ ರಸಜಾಗರದಲ್ಲಿ, ಅದರ ಬೇರ್ಪಡಿಸಲಾಗದ ರುಚಿಯಾಗಿ ಲಯಿಸಬೇಕು, ಔಚಿತ್ಯ ಪೂರ್ಣವಾದ ಗೀತ, ನೃತ್ಯ, ವೇಷ ಭೂಷಣ ಕ್ರಿಯಾದಿಗಳು ಇಲ್ಲಿ ಪ್ರಯೋಜನಕ್ಕೆ ಬರುತ್ತವೆ. ನೃತ್ಯ ನಮ್ಮ ಮನಸ್ಸಿನ ಜಡತೆಯನ್ನು ಬಿಡಿಸಿ

ಚೇತನಗೊಳಿಸುತ್ತದೆ. ಮೃದಂಗದ ಧ್ವನಿ ನಮ್ಮನ್ನು ಲೌಕಿಕಾಸಕ್ತಿಯಿಂದ ಬಿಡಿಸಿ ಭಾವಗ್ರಹಣೋನ್ಮುಖವಾಗಿ ಮಾಡುತ್ತದೆ. ಆಂಗಿಕಾಭಿನಯ ಮಾತಿನ ಅಭಿದಾವೃತ್ತಿಯನ್ನು ಉತ್ತೇಜಿಸಿ ಅರ್ಥಗ್ರಹಣ ಕ್ಲೇಶವನ್ನು ಕಡಿಮೆ ಮಾಡುತ್ತದೆ." (ಯದುಗಿರಿಯ ಅಂಗಳದಿಂದ ಪುಟ-122)

ಇವಿಷ್ಟೂ ಮಾತುಗಳು ಗೀತನಾಟಕಗಳ ರಚನೆಯ ಹಿಂದಿನ ತಾತ್ವಿಕ ನೆಲೆಗಟ್ಟನ್ನು ಸ್ಪಷ್ಟ ಪಡಿಸುತ್ತದೆ. ವಾಸ್ತವವಾಗಿ ಪ್ರಯೋಗದ ದೃಷ್ಟಿಯಿಂದ ಪು.ತಿ.ನ.ರ ಗೀತನಾಟಕಗಳು ಅನೇಕ ಮಿತಿಗಳನ್ನು ಒಳಗೊಂಡಿವೆಯಾದರೂ ಗೀತನಾಟಕ ಸ್ವರೂಪ, ಪ್ರಯೋಗದ ಬಗ್ಗೆ ತಮ್ಮದೇ ಆದ ದೃಷ್ಟಿಯನ್ನು ಹೊಂದಿದ್ದಾರೆಂಬುದು ಸ್ಪಷ್ಟ. ಕಾವ್ಯಕ್ಕಿಂತಲೂ ಸಂಗೀತ, ನೃತ್ಯಗಳು ಸಂವಹನ ದೃಷ್ಟಿಯಿಂದ ಹೆಚ್ಚು ಪರಿಣಾಮಕಾರಿ ಮತ್ತು ಕಾವ್ಯಕ್ಕೆ ಹೆಚ್ಚಿನ ಆಯಾಮಗಳನ್ನು ಕಲ್ಪಿಸುತ್ತದೆ ಎನ್ನುವುದು ಅವರ ಬಲವಾದ ನಂಬಿಕೆಯಾಗಿದೆ ಟಿ.ಎಸ್. ಎಲಿಯಟ್ ಕೂಡಾ ಈ ವಿಚಾರದಲ್ಲಿ ಪು.ತಿ.ನ.ರಿಗೆ ಹತ್ತಿರ ಬರುತ್ತಾರೆ. "ವಾಗರ್ಥ ಸಂಪೃಕ್ತವಾದ ಕಾವ್ಯಕ್ಕೆ ಸಂಗೀತವೇ ಉಸಿರು" ಎಂದು ನಂಬಿರುವುದರ ಜೊತೆಗೆ ಒಂದು ದೇಶದ ಸಂಗೀತ ಆ ದೇಶದ ಸಂಸ್ಕೃತಿಯ ಪರಿಶುದ್ಧರೂಪ; ಜನತೆಯ ಅನುಭವಗಳ ತೀವ್ರ ಅಭಿವ್ಯಕ್ತಿ ಸಾಧ್ಯವಾಗುವುದು ಸಂಗೀತದಲ್ಲಿ, ಜ್ಞಾನವನ್ನು ನಿಶ್ಶೇಷವಾಗಿ ಭಾವಕ್ಕೆ ಪರಿವರ್ತಿಸುವ ಸಾಮರ್ಥ್ಯ ಇರುವುದು ಅದೊಂದಕ್ಕೆ; ಆದ್ದರಿಂದ ಭಾವವೇ ಆತ್ಮ ಪೌಷ್ಠಿಕ ಸಾಮಗ್ರಿ-ಎನ್ನುವ ಪು.ತಿ.ನ.ರು ಕಾವ್ಯ, ಗೀತನಾಟಕಗಳಲ್ಲಿ ಶುಷ್ಕ ತರ್ಕ, ಒಣವೈಚಾರಿ ಕತೆಯನ್ನು, ನವ್ಯದ ಅಸಂಗತತೆಯನ್ನು ಅಷ್ಟಾಗಿ ಮೆಚ್ಚುವುದಿಲ್ಲ. ಸೃಜನಶೀಲವಾದ್ದೆಲ್ಲವೂ ತನ್ನದೇ ಆದ ಕಲಾತ್ಮಕ ಶರೀರವನ್ನು ಪಡೆದು ಮನಃ ಸ್ಪರ್ಶಿಯಾಗಬೇಕು; ಹೃದಯ ಸ್ಪರ್ಶಿಯಾಗಬೇಕು. ಇದು ಸಾಧ್ಯವಾಗುವುದು ಕಾವ್ಯ, ನಾಟಕಗಳು ಭಾವ ಸ್ಪಂದಿಯಾದಾಗ ಮಾತ್ರವೇ ಸಾಧ್ಯ. ಮನೋರಂಜನೆಯ ಅಂಶವನ್ನು ಗೀತನಾಟಕಗಳಲ್ಲಿ ಉಳಿದವುಗಳಿಗಿಂತ ಹೆಚ್ಚಿರುವುದನ್ನು ಗುರುತಿಸಿದ್ದಾರೆ. ಗೀತನಾಟಕ ಪ್ರಕಾರಕ್ಕೆ ರಂಜನೆ, ಪರಿಷ್ಕಾರ, ಸ್ನಿಗ್ಧ ಗೊಳಿಸುವ ಅಮೋಘ ಶಕ್ತಿ ಚೈತನ್ಯಗಳಿವೆ ಎಂಬುದೇ ಅವರ ಬಲವಾದ ನಂಬಿಕೆ. ಜೀವ ಜಗತ್ತುಗಳ ಬಗ್ಗೆ ಸೂಕ್ಷ್ಮ ಸಂವೇದನಾಶೀಲನಾದ, ಬದುಕಿನ ಸಮಸ್ಯೆಗಳ ವಿಚಾರವಾಗಿ ಚಿಂತನ

ಪರನಾದ ಕವಿ, ಪು.ತಿ.ನ. ಅವರು, ಸಾಮಾನ್ಯ ಕಣ್ಣಿಗೆ ಅಗೋಚರವಾದ ಗುಪ್ತ, ಸುಪ್ತ ಸೌಂದರ್ಯವನ್ನೂ, ಅಶ್ರಾವ್ಯವೆನ್ನುವಷ್ಟು ಕ್ಷೀಣ ವಾಗಿರುವ, ಸುತ್ತಲಿನ ಜಗತ್ತಿನಲ್ಲಿ ಅನುರಣಿತವಾಗುತ್ತಿರುವ ನಾದಲಯಗಳನ್ನು ಗುರುತಿಸುತ್ತಾರೆ. ಎಲ್ಲೆಡೆಯೂ ಶ್ರವಣ ಸುಭಗತೆಯನ್ನು ನಿರೀಕ್ಷಿಸುತ್ತಾರೆ. ಕಾವ್ಯವಾಗಲೀ, ನಾಟಕವಾಗಲೀ ಅವುಗಳಲ್ಲಿ ಬಳಕೆಯಾದ ಶಬ್ದಗಳು ಕೇಳುವುದಕ್ಕೆ ಹಿತವಾಗಿರಬೇಕು ಅಂದರೆ ಅವುಗಳಲ್ಲಿ ಸಂಗೀತಾತ್ಮಕಗುಣ ಇರಬೇಕು. ಇದಿಲ್ಲದ ಪಕ್ಷದಲ್ಲಿ ಸಾಹಿತ್ಯ ಪ್ರಕಾರಗಳು ಬಹುಕಾಲ ಬಾಳಲಾರವು ಎಂಬುದು ಅವರ ನಿಲುವಾದರೂ, ಈ ನಿಲುವನ್ನು ಸಾರ್ವತ್ರಿಕವಾಗಿ ಒಪ್ಪುವುದಕ್ಕೆ ಸಾಧ್ಯವಿಲ್ಲ. ಆದರೆ ಅವರ ರಚನೆಗಳ, ಅದರಲ್ಲೂ ಗೀತನಾಟಕಗಳ ಸಂದರ್ಭಕ್ಕೆ ಅವರ ಮಾತುಗಳು, ಆ ಪ್ರಕಾರಕ್ಕೆ ಬದ್ಧವಾದ ತಾತ್ವಿಕತೆಯ ಚೌಕಟ್ಟನ್ನು ಒದಗಿಸಿದೆ ಎನ್ನುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಕಾವ್ಯವಾದರೂ ಅನೇಕ ವೇಳೆ ಅತಿಯಾದ ಸಂಸ್ಕೃತಶಬ್ದಗಳ ಬಳಕೆಯಿಂದ ಪೆಡಸು ಎನಿಸಿದರೂ, ಗೀತನಾಟಕಗಳು ಮಾತ್ರ ಅವರ ನಿರೀಕ್ಷೆಯ ಅಪೇಕ್ಷೆಯ ಶ್ರವಣಸುಭಗತೆಯನ್ನು ಕಾಯ್ದಿರಿಸಿಕೊಂಡಿವೆ.

ಇಷ್ಟುಗಾಢವಾಗಿ ಸಂಗೀತ ತತ್ವಕ್ಕೆ ಅಂಟಿಕೊಳ್ಳುವುದಕ್ಕೆ ಅವರಿಗೆ ಬಾಲ್ಯದಿಂದಲೂ ಲಭ್ಯವಾದ ಸಂಗೀತದ ಸಂಗೀತ ವಿದ್ವಾಂಸರ ಸಾಹಚರ್ಯ. ಕರ್ನಾಟಕದ ಮತ್ತು ಉತ್ತರ ಭಾರತದ ಘನವಿದ್ವಾಂಸರಾದ ಚೆಂಬೈ, ಟೈಗರ್, ಅರಿಯಾಕುಡಿ, ದಕ್ಷಿಣಾಮೂರ್ತಿ ಪಿಳ್ಳೈ, ರಾಜರತ್ನಂ, ಬರಕತ್ ಉಲ್ಲಾಖಾನ್ ಮೊದಲಾದವರ ಸಂಗೀತ ಕೇಳುವ, ಸಂಗೀತಾತ್ಮಕ ವೃತ್ತಿ ನಾಟಕಗಳನ್ನು ನೋಡುವ ಸಂದರ್ಭಗಳು ಒದಗಿಬಂದು, ಅವರ ಮೇಲೆ ದಟ್ಟ ಪ್ರಭಾವ ಉಂಟಾಗಿ, ಸಹಜವಾಗಿ ಅವರಿಗಿದ್ದ ಕಾವ್ಯ ಪ್ರತಿಭೆಯೊಂದಿಗೆ ಸಂಗೀತದ ಸಿಂಗಾರವನ್ನೂ ಅಳವಡಿಸಿ, ಒಂದು ಹೊಸ ಅಭಿವ್ಯಕ್ತಿ ರೂಪವನ್ನು ಕಂಡುಕೊಳ್ಳುವುದು ಅನಿವಾರ್ಯವಾಯಿತು. ಸಂಗೀತದ ಮೋಹ ಎಷ್ಟು ತೀವ್ರವಾಯಿತೆಂದರೆ, ಗೊರೂರರು ಹೇಳುವಂತೆ ಕಾವ್ಯವನ್ನು ಸಂಗೀತವೇ ನುಂಗಿ ಬಿಡುವಂತಾಗಿತ್ತು. ಆದರೂ ಪು.ತಿ.ನ. ಅವರಿಗೆ 'ಗೀತರೂಪಕ' ಪ್ರಕಾರ ಭಾವನಾಂಶ, ಚಿಂತನಾಂಶಗಳ ಸಮುಚಿತ ಸಮನ್ವಯಕ್ಕೆ ಸಮರ್ಥ ಮಾಧ್ಯಮವೆನಿಸಿದ್ದರಿಂದ ಅದರಲ್ಲಿಯೇ

ಮುಂದುವರೆದರು.

ಇವರ ಗೀತರೂಪಕಗಳು ವಿಸ್ತಾರವಾದ ಭಾವ ಪ್ರಪಂಚವನ್ನು ಉನ್ಮೀಲನಗೊಳಿಸುತ್ತವೆ. ಭಾವದ ವಿವಿಧ ಸ್ತರಗಳನ್ನೂ, ವೈವಿಧ್ಯ ಮಯವಾದ ಭಾವರಾಗಗಳನ್ನೂ ಇವು ಬಿಂಬಿಸುತ್ತವೆ; ಅಷ್ಟೇ ಅಲ್ಲ ಸೃಷ್ಟಿ ಸ್ಥಿತಿ. ಬದುಕು ಸಾವು, ದೇವರು, ಧರ್ಮ, ಹಬ್ಬ ಹರಿದಿನ, ಉತ್ಸವ ಜಾತ್ರೆ,ನಿಸರ್ಗ, ಜೀವನಾದರ್ಶಗಳು, ಮೌಲ್ಯಗಳು, ದ್ವಂದ್ವಗಳು - ಮೊದಲಾಗಿ ಎಲ್ಲವನ್ನೂ ಒಳಗೊಂಡಂತೆ, ಸಾಂಪ್ರದಾಯಿಕ, ಪಾರಂಪರಿಕ, ರೂಢಿಯ ನಂಬಿಕೆ, ವಿಚಾರಗಳ ಜೊತೆಗೆ ಸ್ವತಂತ್ರವೂ ಸಮಕಾಲೀನವೂ ಆದ ಅನೇಕ ವಿಚಾರಗಳ ಬಗ್ಗೆ ಅವರು ನಡೆಸಿದ ಚಿಂತನೆಗಳೂ, ದೃಷ್ಟಿ ದರ್ಶನಗಳೂ, ಇವುಗಳ ಮೂಲಕ ಅಭಿವ್ಯಂಜಿತವಾಗಿವೆ.

ಸಂಪ್ರದಾಯ ನಿಷ್ಠೆಯನ್ನು ಉಳಿಸಿಕೊಂಡೇ ಅಲ್ಪ ಸ್ವಲ್ಪ ವ್ಯತ್ಯಾಸಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದ್ದರಿಂದಲೇ ಗೀತನಾಟಕ ಸಂವಿಧಾನದಲ್ಲಿ, ಸಂಸ್ಕೃತನಾಟಕ ಸಂಪ್ರದಾಯದಲ್ಲಿನ ನಾಂದಿ, ಸೂತ್ರಧಾರ, ವಿದೂಷಕರನ್ನು ತರುವುದರ ಜೊತೆಗೆ ಗ್ರೀಕ್ ನಾಟಕ ಸಂಪ್ರದಾಯದ ಮೇಳವನ್ನು ಮತ್ತು ಸ್ವಂತ ಕಲ್ಪನೆಯ ಕಥಕವೃಂದ, ಭಾವುಕ, ಸಹಚರಿ ಇತ್ಯಾದಿ ಹೊಸ ಅಂಶಗಳನ್ನು ತಂದುಕೊಂಡಿದ್ದಾರೆ.

ಪು.ತಿ.ನ. ನಮ್ಮ ಆಧುನಿಕ ಮತ್ತು ನವೋದಯ ಕಾವ್ಯ ಸಂಪ್ರದಾಯದ ಅತಿಮುಖ್ಯ ಕವಿ, ನಾಟಕಕಾರ, ಪ್ರಬಂಧಕಾರ, ಕಾವ್ಯ ಮೀಮಾಂಸಕ - ಹೀಗೆ ಎಷ್ಟೊಂದು ವ್ಯಕ್ತಿತ್ವಗಳನ್ನು ರೂಢಿಸಿಕೊಂಡಿದ್ದರೂ, ಸದಾ ಎಚ್ಚರ ಪ್ರಜ್ಞೆಯಲ್ಲಿ ಕೆಲಸಮಾಡುವುದು ಅವರ ಕಾವ್ಯ ಜಿಜ್ಞಾಸೆ. ತಾತ್ವಿಕತೆ, ದರ್ಶನಗಳು ಅವರ ಸೃಜನಶೀಲ ಮನಸ್ಸಿನ ಅನನ್ಯ ಭಾಗ. ಅವರ ಗೀತನಾಟಕಗಳು ರಂಗಸಿದ್ಧಾಂತಗಳಾನ್ವಯ ದೃಷ್ಟಿಯಿಂದ ಸಫಲತೆಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರಬಹುದಾದರೂ ಅವುಗಳ ಕಾವ್ಯ ಮೌಲ್ಯ, ಕಲಾಮೌಲ್ಯದ ಬಗ್ಗೆ ಎರಡು ಮಾತಿಲ್ಲ. ಸಮೃದ್ಧ ಜೀವನಾನುಭವದ ಸರಳ ಅಭಿವ್ಯಕ್ತಿಯಾಗಲೀ, ಸಂಕೀರ್ಣ ಅಭಿ ವ್ಯಕ್ತಿಯಾಗಲೀ ಚಿಂತನೆಯ ಎಳೆಗಳು ಹಾಸು ಹೊಕ್ಕಿರುತ್ತವೆ. ಆಕಾರದ ಒಡಲಲ್ಲಿ ಚಿಂತನೆಯ ಆತ್ಮ ನಿಕ್ಷಿಪ್ತವಾಗಿರುತ್ತದೆ. ಗೀತನಾಟಕಗಳಿಗೆ ಎಂತಹ

ಗಾಢವಾದ, ಗಂಭೀರವಾದ ತಾತ್ವಿಕ ಚಿಂತನೆಗಳನ್ನು ಧಾರಣ ಮಾಡುವ ಶಕ್ತಿಯಿದೆಯೆಂಬುದಕ್ಕೆ 'ಅಹಲ್ಯೆ' ಗೋಕುಲ ನಿರ್ಗಮನ 'ಸತ್ಯಾಯನ ಹರಿಶ್ಚಂದ್ರ' -ನಾಟಕಗಳೇ ಸಾಕ್ಷಿಯಾಗಿವೆ. ಭಕ್ತಿ, ಪ್ರೀತಿ, ಸೌಂದರ್ಯ, ಮೌಲ್ಯಗಳನ್ನು ಆರಾಧಿಸುವ ಕವಿ ನೋಡಿದ್ದೆಲ್ಲದರಲ್ಲಿಯೂ, ಅನುಭವಕ್ಕೆ ಬಂದದ್ದೆಲ್ಲದರಲ್ಲಿಯೂ ಈ ಅಂಶಗಳ ಈ ತತ್ವಗಳ ಶೋಧಕ್ಕೆ, ಅನುಸಂಧಾನಕ್ಕೆ ಪ್ರಯತ್ನಿಸುತ್ತಾರೆ. ಮಾನವಲೋಕದ ಕಲ್ಯಾಣಕ್ಕಾಗಿ, ಪ್ರೀತಿ, ಸ್ನೇಹ, ಸೌಹಾರ್ದಗಳಿಗಾಗಿ ತುಡಿಯುತ್ತಾರೆ.

ಅತಿಯಾದ ಭಾವನಾತ್ಮಕತೆ, ತಾದಾತ್ಮ್ಯಗಳಿಂದಾಗಿ, ಸತ್ಯ, ಶಿವ, ಸೌಂದರ್ಯ, ಆನಂದಗಳ ಅದಮ್ಯ ಅಭೀಪ್ಸೆಯಿಂದಾಗಿ ಸಮಾಜ ವಿಮುಖತೆಯೇ ಹೆಚ್ಚಾಗಿದೆ; ಅವರಿಗೆ ವರ್ಗ, ವರ್ಣ, ಜಾತಿ, ಕೋಮು ಸಂಘರ್ಷಗಳಾಗಲೀ ರಾಜಕೀಯ ಸಮಸ್ಯೆಗಳಾಗಲೀ ಅವರ ಗಮನಕ್ಕೆ ಬರುವುದೇ ಇಲ್ಲವೆಂಬ ಒಂದು ಅಪಸ್ವರವಿದೆ ಯಾದರೂ ಅವರು ಕಟ್ಟಿಕೊಂಡ ಕಾವ್ಯಲೋಕದ ಪರಿ ಬೇರೆ. ಎಲ್ಲರ ಗಮನಕ್ಕೂ ಬರುವ ಸಮಕಾಲೀನ ಸಮಸ್ಯೆಗಳ ಅರಿವಿದ್ದೂ, ಅವುಗಳಿಗೆ ಸ್ಪಂದಿಸುವ, ತಳೆಯುವ ತಾತ್ವಿಕತೆಯ ನಿಲುವುಗಳೇ ಬೇರೆ. ಕಲಾತ್ಮಕ ಆವರಣಗಳ ಮೂಲಕ ವಾಗಿಯೂ, ಭಾವನಾತ್ಮಕತೆ, ಲಾಲಿತ್ಯಗಳ ಭಾಷೆಯ ಮೂಲಕವಾಗಿಯೂ ತತ್ವ ವಿಚಾರಗಳನ್ನು ಕಟ್ಟಿಕೊಡಬಲ್ಲರು. ಏನೇ ಆದರೂ ಅವರು ಮುಖ್ಯವಾಗಿ ಬಯಸುವುದು, ಆನಂದ ಮತ್ತು ರಸಾನುಭೂತಿ, ಸೃಜನ ಪ್ರಕ್ರಿಯೆಯ ಅವಧಿಯಲ್ಲಿ ಕವಿಗೆ, ನಂತರ ಸಹೃದಯನಿಗೆ ! ಇದು ತಮ್ಮ ಕೃತಿಗಳಿಂದ ಸಾಧ್ಯವಾಗುವುದಾದರೆ, ಅವರಿಗೆ ಧನ್ಯತೆಯ ಭಾವ !!

-- 000 --



ಡಾ ॥ ವಿಜಯಾ ಅವರದು ಬಹು ಮುಖ ಆಸಕ್ತಿ. ಸಾಹಿತ್ಯಾಧ್ಯಯನದ ಜೊತೆಗೆ ಸಂಗೀತ, ನೃತ್ಯ, ನಾಟಕಗಳಲ್ಲೂ ಅವರಿಗೆ ಪರಿಶ್ರಮವಿದೆ. ಈ ಅಂಶವೂ ಗೀತನಾಟಕ ಅಧ್ಯಯನದಲ್ಲಿ ಅವರಿಗೆ ನೆರವಾಗಿದೆ.

'ಗೀತನಾಟಕ' ಪಾಶ್ಚಾತ್ಯ 'ಅಪೆರಾ'ವನ್ನು ಹೋಲುತ್ತಾದರೂ ಅದಕ್ಕಿಂತ ಭಿನ್ನ ಅಪೆರಾದಲ್ಲಿ ಗಾಯನವೇ ಪ್ರಧಾನ; ಕಾವ್ಯಾಂಶ ಅದಕ್ಕೆ ಪೂರಕವಷ್ಟೆ ಬಹಳಷ್ಟು ಸಲ ಗಾಯಕರೇ (ಸಂಗೀತಗಾರರೇ) ಅಪೆರಾದ ರಚನೆಯನ್ನು ಮಾಡುತ್ತಾರೆ. ಆದರೆ ಗೀತನಾಟಕದಲ್ಲಿ ಕಾವ್ಯ, ಸಂಗೀತ, ನೃತ್ಯ ಒಂದು ಹದದಲ್ಲಿ ಸೇರುತ್ತದೆ. ಇದೊಂದು ಬಗೆಯ ವಿಶಿಷ್ಟ ಪಾಕ. ಡಾ॥ ವಿಜಯಾ ಅವರು ಪು.ತಿ.ನ. ತಮ್ಮ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿ ಗೀತನಾಟಕವನ್ನು ಆರಿಸಿಕೊಂಡಿದ್ದರ ಬಗ್ಗೆ ಆರಂಭದಲ್ಲಿ ಚರ್ಚಿಸುತ್ತಾರೆ.

ಗೀತನಾಟಕಗಳಲ್ಲಿ ತಾತ್ವಿಕ ಚಿಂತನೆಗಳಿಗಿಂತ ಮನೋಲ್ಲಾಸವೇ ಮುಖ್ಯ ಎಂಬ ರೂಢಿಯ ನಂಬಿಕೆಯನ್ನು ಪು.ತಿ.ನ. ಅವರ ಗೀತನಾಟಕಗಳು ಹೇಗೆ ನಿರಾಕರಿಸುತ್ತವೆಂಬುದನ್ನು ಡಾ ॥ ವಿಜಯಾ ಅವರು ವಿವರ ವಿಶ್ಲೇಷಣೆಯ ಮೂಲಕ ಕೃತಿಯ ಉದ್ದಕ್ಕೂ ಪ್ರತಿಪಾದಿಸುತ್ತಾರೆ. ತಾತ್ವಿಕತೆ ಪು.ತಿ.ನ. ಅವರಲ್ಲಿ ಕೃತಿಯ ಅಂತರ್ಗತ ಭಾಗವಾಗಿ ಪ್ರಕಟವಾಗುತ್ತದೆ ಎಂಬುದು ಅವರ ನಿಲುವು.

ಅಹಲ್ಯೆ, ಗೋಕುಲ ನಿರ್ಗಮನದಂತಹ ಒಂದೆರಡು ಕೃತಿಗಳನ್ನು ಹೊರತು ಪಡಿಸಿದರೆ ಪು.ತಿ.ನ. ಅವರ ಗೀತನಾಟಕಗಳ ಬಗ್ಗೆ ಕನ್ನಡ ವಿಮರ್ಶೆ ಅಷ್ಟಾಗಿ ಚರ್ಚಿಸಿದಂತಿಲ್ಲ. ಡಾ ॥ ವಿಜಯಾ ಅವರ ಈ ಕೃತಿ ಆ ಕೊರತೆಯನ್ನು ಸಮರ್ಥವಾಗಿ ತುಂಬಿದೆ. ಅವರ ಎಲ್ಲಾ ನಾಟಕಗಳ ರಚನಾ ವಿನ್ಯಾಸ, ಅವುಗಳಲ್ಲಿ ಅಂತರ್ಗತವಾಗಿರುವ ಚಿಂತನೆಯ ಸ್ವರೂಪ - ಇವುಗಳನ್ನು ಡಾ ॥ ವಿಜಯಾ ಅಧ್ಯಯನದಲ್ಲಿ ವಿಸ್ತಾರವಾಗಿ ಅವಲೋಕಿಸಿದ್ದಾರೆ. ಇಂತಹ ಸಮಗ್ರ ಅಧ್ಯಯನಗಳು ಕನ್ನಡ ಸಂಸ್ಕೃತಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಉಪಯುಕ್ತ.

ಡಾ ॥ ನರಹಳ್ಳಿ ಬಾಲಸುಬ್ರಹ್ಮಣ್ಯ

